ಮನೋಹರ ಗ್ರಂಥಮಾಲೆಯ ೬೩ನೆಯ ಕುಸುಮ

# ಕೆನ್‌ಸಿಂಗ್‌ಟನ್ ಪಾರ್ಕ್

(ಕತೆ ಪ್ರಬಂಧ ನಾಟಕ ಹಾಡುಗಳ ಸಂಗ್ರಹ)

ಬರೆದವರು

**ಕೆ. ಗೋಪಾಲಕೃಷ್ಣರಾಯರು**

ಮನೋಹರ ಗ್ರಂಥಪ್ರಕಾಶನ ಸಮಿತಿ

ಧಾರವಾಡ

ಡಿಸೆಂಬರ ೧೯೪೩ ಬೆಲೆ: ೧—೪—೦

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು

ಶ್ರೀ. ದ. ರಾ. ಬೇಂದ್ರೆ, ಎಂ.ಎ.

ಶ್ರೀ. ವಿ. ಕೃ. ಗೋಕಾಕ, ಬಿ.ಎ. (ಆಕ್ಸನ್)

ಶ್ರೀ. ರಂ. ಶ್ರೀ. ಮುಗುಳಿ, ಎಂ.ಎ., ಬಿ.ಟಿ.






ಸಂಪಾದಕ

ಜಿ. ಬಿ. ಜೋಶಿ



ಪ್ರಕಾಶಕರು
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ, ಧಾರವಾಡ

ಮುದ್ರಕರು
ಬಿ. ಬಿ. ಡಿ. ಪವರ್ ಪ್ರೆಸ್
ಅರಳೆಪೇಟೆ, ಬೆಂಗಳೂರು ನಗರ

# ನಮ್ಮ ಮಾತು

'ಕೆನ್‌ಸಿಂಗ್‌ಟನ್ ಪಾರ್ಕ್' ಗ್ರಂಥದ ಬರವನ್ನು ಸೂಚಿಸಿ ಜಾಹೀರುಮಾಡಿ ಅದೆಷ್ಟೋ—ಅಂದರೆ ಮರೆತುಬಿಡುವಷ್ಟು ಕೂಡ—ಕಾಲ ಕಳೆದುಹೋಯಿತು. ಏನೇನೋ ಕಾರಣಗಳಿಂದ ಇಲ್ಲಿಯವರೆಗೆ ಅದನ್ನು ಪ್ರಕಟಿಸುವ ಯೋಗಾಯೋಗ ಕೂಡಿಬಂದಿರಲಿಲ್ಲವೆಂದೇ, 'ಅಂತೂ ಒಮ್ಮೆ ಹೊರಡಿಸಿದೆವು!' ಎಂದು ಗೆದ್ದ ಮುಕ್ತಮನಸ್ಸಿನಿಂದ ಹೇಳ ಬೇಕಾಗಿದೆ. ಬಹಳ ದಿನಗಳ ಮೇಲಾದರೂ ಚಿಂತೆಯಿಲ್ಲ, ಅಂತೂ ಪ್ರಕಟಿಸಿದೆವಲ್ಲ ಎಂಬ ಸಂತೋಷ ನಮಗಿದೆ. ಗ್ರಾಹಕರೂ ಈ ನಮ್ಮ ಸಂತೋಷದಲ್ಲಿ—ಸದ್ಯದ ಕಾಲ ನೆನೆದು—ಸಹಭಾಗಿಗಳಾಗುವರೆಂದು ನಾವು ನಂಬಿದ್ದೇವೆ.

ಗ್ರಂಥದ ಬಗ್ಗೆ, ಗ್ರಂಥಕರ್ತರ ಬಗ್ಗೆ ತೂಗಿ ಹೇಳುವುದನ್ನೆಲ್ಲ ಶ್ರೀಮಾನ್ ಬೇಂದ್ರೆಯವರು 'ಮುನ್ನುಡಿ' ಯಲ್ಲಿ ಮಾರ್ಮಿಕವಾಗಿ ಹೇಳಿ, ಗೋಪಾಲಕೃಷ್ಣರಾಯರ ಕೃತಿಕಲ್ಪನೆಯ ಗುಡಿಗೆ ಕಳಸವಿಟ್ಟಿ ದ್ದಾರೆ. ಗೋಪಾಲಕೃಷ್ಣರಾಯರು ಇಲ್ಲಿ ಕುಶಲ ಕತೆಗಾರರಾಗಿದ್ದಾರೆ, ನುರಿತ ನಾಟಕಕಾರರಾಗಿದ್ದಾರೆ, ಮೈಮರೆಸುವಂತೆ ಹರಟೆ ಹೊಡೆಯುವ ಸವಿಗಾರರಾಗಿದ್ದಾರೆ, ಕೊನೆಗೆ ತಮ್ಮನ್ನೆ ಮರೆತುಬಿಡುವ ಕವಿಗಳಾಗಿ ದ್ದಾರೆ. ತಮ್ಮ ಈ ವೈವಿಧ್ಯಪೂರ್ಣ ಸಂಗ್ರಹವನ್ನು ನಮ್ಮ ಮಾಲೆಗೆ ಕೊಟ್ಟುದಕ್ಕಾಗಿ ಶ್ರೀಮಾನ್ ಗೋಪಾಲಕೃಷ್ಣರಾಯರನ್ನೂ, ಹೌದೆನ್ನು ವಂತೆ 'ಮುನ್ನುಡಿ'ಯನ್ನು ಬರೆದುಕೊಟ್ಟ ಶ್ರೀಮಾನ್ ಬೇಂದ್ರೆಯವ ರನ್ನೂ ನಾವು ಕೃತಜ್ಞತಾಪೂರ್ವಕವಾಗಿ ವಂದಿಸುತ್ತೇವೆ.

ಹೊದಿಕೆಚಿತ್ರ ಬರೆದುಕೊಟ್ಟ ಗೆಳೆಯ ರಾಘವೇಂದ್ರರಿಗೂ ಅಲ್ಪಾವಕಾಶದಲ್ಲಿಯೆ ಸುಂದರವಾಗಿ ಅಚ್ಚುಮಾಡಿಕೊಟ್ಟ ಬಿ. ಬಿ. ಡಿ. ಪವರ್ ಪ್ರೆಸ್ಸಿನವರಿಗೂ ನಾವು ತುಂಬಾ ಉಪಕೃತರಾಗಿದ್ದೇವೆ.

—**ಸಂಪಾದಕ.**

## ಅಭಿವಂದನೆ

"ಗದಗಿನಿಂದ ಶ್ರೀಯುತರಾದ ಗೋಕುಲದಾಸ ವಿಠ್ಠಲದಾಸ ವಾರಕರ, ಭಾಯಿದಾಸ ಕೃಷ್ಣದಾಸ ವಾರಕರ, ದತ್ತುದಾಸ ಭವಾನ ದಾಸ ಪುಣೇಕರ ಈ ಮೂವರು ಮಹನೀಯರು ಉದಾರ ಮನಸ್ಸಿನಿಂದ ಮನೋಹರಗ್ರಂಥಮಾಲೆಗೆ ಹೊಸ ವರುಷದಿಂದ ಆಜೀವ ಚಂದಾದಾರ ರಾಗಿ ಸಹಾಯ ಮಾಡಿದ್ದಕ್ಕಾಗಿ ನಾವು ಅವರಿಗೆ ನಮ್ಮ ಆದರಪೂರ್ವಕ ಅಭಿವಂದನೆಗಳನ್ನು ಸಲ್ಲಿಸುತ್ತೇವೆ."

—**ಸಂಪಾದಕ.**

# ಅರಿಕೆ

ಕೆನ್‌ಸಿಂಗ್‌ಟನ್ ಪಾರ್ಕನ್ನು ಕಂಡರೆ ನನಗೊಂದು ಹುಚ್ಚು. ಇದರ ವಿಷಯವಾಗಿ ಈ ಭಾವನಾಲಹರಿಗಳನ್ನು ಹರಿಸಿದ್ದೇನೆ. ನನ್ನ ಮಿತ್ರರಲ್ಲಿ ಹಲವರಿಗೆ ನನ್ನಷ್ಟಿಲ್ಲದಿದ್ದರೂ ಸ್ವಲ್ಪವಾದರೂ ಇದರ ವಿಷಯದಲ್ಲಿ ಮಮತೆಯುಂಟು. ಈ ಮಮತೆ ಇನ್ನೂ ಸ್ವಲ್ಪ ಹೆಚ್ಚಾಗಿ ಅವರ ಲೇಖನಿಯ ತುದಿಯಲ್ಲಿಳಿದರೆ, ಇದರ ಸಂಬಂಧವಾದ ಇನ್ನೊಂದು ಗ್ರಂಥ ಮನೋಹರ ಗ್ರಂಥಮಾಲೆಯಲ್ಲಿ ಅರಳಬಹುದು. ಅದು ಶೀಘ್ರವಾಗಿ ಆಗಲೆಂದು ಹಾರೈಸುತ್ತೇನೆ.

ಈ ಗ್ರಂಥಕ್ಕೆ ತಿಲಕಪ್ರಾಯವೂ, ಆಶೀರ್ವಾದರೂಪವೂ ಆದ ಮುನ್ನುಡಿಯನ್ನು ಬರೆದುಕೊಟ್ಟುದಕ್ಕಾಗಿ ಕವಿವರ್ಯರಾದ ಹಿರಿಯ ಗೆಳೆಯ ಬೇಂದ್ರೆಯವರಿಗೂ, ನನ್ನ ಕೃತಿಯನ್ನು ಕಾಣಿಕೆಯಾಗಿ ಸ್ವೀಕರಿಸಿ ನನಗೆ ಧನ್ಯತಾಭಾವವನ್ನು ಉಂಟುಮಾಡಿರುವ ಸಾಹಿತ್ಯಾಚಾರ್ಯ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರರಿಗೂ ನಾನು ಚಿರ ಕೃತಜ್ಞನಾಗಿದ್ದೇನೆ.

ಕಾಗದದ ಮುಗ್ಗಟ್ಟಿನ ಈ ಕಾಲದಲ್ಲಿ ಇದನ್ನು ಪ್ರಕಟಿಸುವ ಸಾಹಸವನ್ನು ಕೈಕೊಂಡ ಮನೋಹರ ಗ್ರಂಥಮಾಲೆಯ ಸಂಪಾದಕರಾದ ಗೆಳೆಯ ಗೋವಿಂದಾಚಾರ್ಯ ಜೋಶಿಯವರಿಗೂ ತಮ್ಮ ಕೃತಿಗಳನ್ನು ಇದರಲ್ಲಿ ಸೇರಿಸಿಕೊಳ್ಳಲು ಅನುಮತಿಯಿತ್ತ ಗೆಳೆಯರಾದ ಶ್ರೀಮಾನ್ ತೀ. ನಂ. ಶ್ರೀಕಂಠಯ್ಯ ಮತ್ತು ಪು. ತಿ. ನರಸಿಂಹಾಚಾರ್ಯರಿಗೂ, ಹಲಸೂರಿನ ಕೆರೆಯ ಚಿತ್ರವನ್ನು ಚಿತ್ರಿಸಿ ಕಳುಹಿಸಿದ ಡಾ. ಸೀತಾರಾಮರಾಯರಿಗೂ ನಾನು ವಂದಿಸುತ್ತೇನೆ.

ಇದುವರಿಗೆ ಪ್ರಕಟಿಸಿದ ನನ್ನ ಪ್ರತಿಯೊಂದು ಕೃತಿಯ ವಿಷಯದಲ್ಲಿಯೂ ಕನ್ನಡಿಗರು ಆದರವಿಶ್ವಾಸಗಳನ್ನು ತೋರಿಸಿದ್ದಾರೆ. ಅದಕ್ಕಾಗಿ ನಾನವರಿಗೆ ಚಿರಋಣಿಯಾಗಿದ್ದೇನೆ. ಇದರಲ್ಲಿನ ಕೃತಿಗಳೂ ಅವರ ಆದರಕ್ಕೆ ಪಾತ್ರವಾಗುವವೆಂದು ನಂಬಿದ್ದೇನೆ.

ಮಾರ್ಗಶಿರ ಶುದ್ಧ ಪಾಡ್ಯಮಿ,<br>ಶ್ರೀ ಸ್ವಭಾನುನಾಮ ಸಂವತ್ಸರ.

**ಕೆ. ಗೋಪಾಲಕೃಷ್ಣರಾಯ.**

# ಮುನ್ನುಡಿ

ಅಂತೂ ಗೆಳೆಯ ಗೋಪಾಲಕೃಷ್ಣರಾಯರ 'ಕೆನ್‌ಸಿಂಗ್‌ಟನ್ ಪಾರ್ಕ್' ವ್ಯೆ ತಾಳಿತು. ಈ ಕಲ್ಪನೆಯ ಗಜಗರ್ಭವನ್ನು ಅವರು ಹೊತ್ತ ಬಯಕೆಯ ದಿನಗಳ ಸಂಭ್ರಮ ಹೇಳಲಾಸಲ್ಲ. ಅವರೊಡನೆ ನಾನು ಈ 'ಪಾರ್ಕು' ನೋಡಿ ಬಂದಿದ್ದೇನೆ. ಜಿನಗರ್ಭಾವತರಣಕ್ಕೆ ಇಂದ್ರ ಮಾಡುವ ವಿಲಾಸವಿಭ್ರಮದಂತೆ ಗೋಪಾಲಕೃಷ್ಣರಾಯರ ರೀತಿ ನಡತೆಗಳು ಇದ್ದುವು 'ಕೆನ್‌ಸಿಂಗ್‌ಟನ್ ಪಾರ್ಕ್' ಸಿದ್ಧಿ, ಪ್ರಕಟನೆ ಗಳಿಗಾಗಿ. ರೂಪದಲ್ಲಿ ಈ ಕೂಸಿಗೆ 'ಗ್ಲ್ಯಾಕ್ಸೋ' ಬೇಬಿಯ ವ್ಯೆಗೊಬ್ಬು ಇರದಿದ್ದರೂ ಈ ಗ್ರಂಥದ ಗಾತ್ರದಲ್ಲಿ ತನ್ನದೇ ಆದ ಒಂದು ಆರೋಗ್ಯದ ಚಿಹ್ನವಿದೆ, ರೂಪವಿದೆ, ಕಳೆಯಿದೆ, ಲಕ್ಷಣವಿದೆ. ಗೋಪಾಲಕೃಷ್ಣ ರಾಯರ ಮಾನಸಪುತ್ರನಂತೆ ಒಪ್ಪುತ್ತಿದೆ. ಇದರ ಅಂಗಾಂಗ ತಿದ್ದುವ ಸೂಲಗಿತ್ತಿತನದಲ್ಲಿ ನಾನೂ ಕೈಗೂಡಿಸಿದ್ದುದೂ ಒಂದು ಕಾರಣವಾಗಿ ಈ ಗ್ರಂಥಕ್ಕೆ ಮಾಂಗಲ್ಯತಿಲಕವೆಂದು ನಾನು ಮುನ್ನುಡಿ ಬರೆಯುತ್ತಿದ್ದೇನೆ.

ಮುನ್ನುಡಿಕಾರನೆಂಬ ಭಯದಿಂದ ಗ್ರಂಥದ ಒಳ್ಳೆಯತನವನ್ನು ಮೆಚ್ಚಲು ಹೊಗಳಲು ನಾನು ಹಿಂದೆಗೆಯಲಾರೆ. ಮೊದಲೆ ಗೋಪಾಲ ಕೃಷ್ಣರಾಯರ ಲೇಖನಶೈಲಿ ಹಸುವಿನ ಹಾಲಿನಂತೆ ತೆಳುವಾಗಿ ಹಸನಾಗಿ, ಚೊಕ್ಕ ಸವಿಯಾಗಿ ಇದ್ದುದು; ಅದರಲ್ಲಿ ಬೇರೆ, ಕವನ, ನಾಟಕ, ಪ್ರಬಂಧ, ಕತೆಯೆಂಬ ರೂಪವ್ಯೆವಿಧ್ಯದ ಕೇಶರ ಚಿಮುಕಿಸಿದ್ದಾರೆ ಆ ಹಾಲಿನಲ್ಲಿ. ಬಹಳೇ ನಾಜೂಕು ಹೊಟ್ಟೆಯವರಿಗೆ ಇದರಲ್ಲಿ ಪುರೋ ಗಾಮಿತ್ವದ 'ವ್ಯಾಗ್‌ಸಲ್ಫಿ'ನ ಖಾಟ ತೋರಬಹುದು. ಅದು ಹಾಗಲ್ಲ. ಅದು ಇಂದಿನ 'ರೇಶನ್' ಸಕ್ಕರೆಯ ರುಚಿ. ಏನೇ ಇರಲಿ, ಗೋಪಾಲ ಕೃಷ್ಣರಾಯರ ಕೃತಿಗಳಲ್ಲಿ ಒಳ್ಳೆ ಹದಕ್ಕೆ ಬಂದ ದೃಷ್ಟಿ–ಸೃಷ್ಟಿಯ ಸಂಗಮವನ್ನು ಇಲ್ಲಿ ನಾವು ಕಾಣುತ್ತೇವೆ.

ಈ ಕೃತಿಯಲ್ಲಿ ಆತ್ಮಚರಿತ್ರೆ, ಲೋಕಚರಿತ ಸರಿಪಾಲಾಗಿ ಸೇರಿ ಕೊಂಡಿವೆ. ಇದು ಕಲ್ಪನೆಯ ಕೃತಿಯಲ್ಲ, ಕೃತಿಯ ಕಲ್ಪನೆ. ಹೊಟ್ಟೆ ಯಲ್ಲಿ ಕುದಿದು ಪಾಕಗೊಂಡ ಪಿಂಡ ಮಾತಿನ ಮೂಲಕ ಇಲ್ಲಿ ಮೂರ್ತಿ ಯಾಗಿ ನಿಂತಿದೆ. ಪ್ರಾರಂಭಕ್ಕೆ ಸಂಸ್ಕೃತ ಕಾವ್ಯದ ಕನ್ನಡ ತೋರಣವಿದೆ.

ಅದರ ಬೆಂಬದಿಗೆ ಗ್ರಂಥಕರ್ತರ ನಚ್ಚಿನ ಸಖರ, ಮೇಲುಕೋಟೆಯ ಮೌನವನ್ನೆ ಮಲೆಯಾಗಿ ಮಿಂಚಾಗಿ ಕನ್ನಡ ನುಡಿಯ ಗುಡಿಯಾಗಿ ಎತ್ತಿ ಹಿಡಿಯುವ ನನ್ನ ಗೆಳೆಯರಾದ ಪುರೋಹಿತ ನರಸಿಂಹಾಚಾರ್ಯರ ಒಂದು ಭಾವಕವನ. ಮುಂದೆ ಗೋಪಾಲಕೃಷ್ಣರಾಯರ ಒಂದು ಪ್ರಬಂಧ, ಒಂದು ಕವನ, ಒಂದು ಕಥೆ, ಒಂದು ರೂಪಕ, ಒಂದು ಇರುಳುಗನಸು–ಹಗಲುಗನಸು, ಮತ್ತೊಂದು ಕವನ, ಒಂದು ರಸನಿಮಿಷ, ಹೀಗೆ ಏಳು ಕೃತಿಗಳು–ಅವರ ಸರಸ್ವತಿಯ ಸಪ್ತಪದಿ; ಅವರ ಭಾವನಂದನದ ಕ್ರೀಡೆ.

ಗೋಪಾಲಕೃಷ್ಣರಾಯರು ಮೇಲ್ತರಗತಿಯ ಕತೆಗಾರರೆಂದು ನಾಡು ಬಲ್ಲದು. ಹದಿಮೂರು ವರುಷಗಳ ಹಿಂದೆ ಮಿತ್ರರಾದ ಶ್ರೀ ಅ. ನ. ಕೃಷ್ಣರಾಯರಿಂದ ಸಂಪಾದಿತವಾದ 'ಪ್ರಣಯ ಗೀತ' ಗಳ ಸಂಗ್ರಹದಲ್ಲಿ ಗೋಪಾಲಕೃಷ್ಣರಾಯರ ಗೀತಗಳು ನನ್ನ ಗೀತಗಳೊಡನಿದ್ದವು. ಇಷ್ಟು ದಿವಸ ಅರನಿದ್ದೆಯ ವಿಭ್ರಮದಲ್ಲಿದ್ದ ಅವರ ಕವಿತಾಸುಂದರಿ ಎದ್ದೊಡನೆ ದಿಟ್ಟತನದ ಚದುರೆಯಂತೆ ಮಾತಾಡುವಳೆಂದು ನಾನು ನಂಬಿರಲಿಲ್ಲ. ಸ್ವಾತಂತ್ರ್ಯವು ನಾಡಿಗೆ ಬಂದ ಮೇಲೆ ಆಗುವದಾಗಲಿ, ಈಗಾಗಳೆ 'ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ........' ಕನ್ನಡನಾಡು ಒಂದಾದ ಕನಸನ್ನು ಕೃತಿಬಂಧದಲ್ಲಿ ಕಟ್ಟಿದ್ದಾರೆ ಈ ಕವಿಗಳು. ರವಿ ಕಾಣುವ ಮುಂಚೆ ಕವಿ ಕಂಡಿದ್ದಾನೆ. 'ಪಾರ್ಕಿನ ಲಚುಮಿ' ಗೋಪಾಲಕೃಷ್ಣರಾಯರ ಮಾನಸಪುತ್ರಿ. ಈ ರೂಪಕವನ್ನು ನಾನು ಬಹಳ ಮೆಚ್ಚಿದ್ದೇನೆ. ಅದು ಸರ್ವಾಂಗ ಸುಂದರವಾದ ತೇಜಃಪುಂಜ ಕೃತಿ. ಅದರ ವಸ್ತು, ಸಂವಾದ, ಹಾಡು, ಕತೆಯ ಬೆಳೆವಣಿಗೆ, ಕೊನೆ, ಮುಗ್ಧಬಾಲರ ಆವರಣ, ಎಲ್ಲವೂ ಹೊಂದಿಕೆಯಾಗಿದೆ. ಯಕ್ಷಲೋಕದ ಪಕ್ಷಿಗಾನದಂತೆ ಕನಸೊ ನನಸೊ ಎಂದು ಭ್ರಮೆಗೊಳಿಸುವುದು ಇಲ್ಲಿಯ ಕಲೆ. ಕಾಮನ ಹುಣ್ಣಿಮೆಯ ರಾತ್ರಿ ಭೀಮನ ಕನವರಿಕೆಯಾದಂತೆ 'ಪಾರ್ಕೊಳು ಹುಣ್ಣಿಮೆ' ಎಂಬ ಇರುಳುಗನಸು ಹಗಲುಗನಸಾಗಿ ರಮ್ಯವಾಗಿದೆ. 'ಪಲ್ನಿಸಾಮಿ, ಬೆಟ್ಸಿ' ಕಥೆ ಕಥನಗಳು, ಕತೆಗಾರರಾದವರಿಗೆ ಭೂಷಣವಾಗಿಯೆ ಇವೆ. ದೋಣಿಯ ಹಾಡು

ಆನೆಯ ಬಾಲ. ಇಂತು ಗೋಪಾಲಕೃಷ್ಣರಾಯರ ಕೃತಿಯ ಗಜಗೌರಿ 'ಕೆನ್‌ಸಿಂಗ್‌ಟನ್ ಪಾರ್ಕಿ'ನಲ್ಲಿ ವನವಿಹಾರ ಮಾಡುವಳು.

ಮುನ್ನುಡಿ ಬರೆಯ ಹೋಗಿ ಪುಟ್ಟ ವಿಮರ್ಶೆಯಾಯಿತೋ, ವಿಮರ್ಶೆಯ ವಿಲಾಸದಲ್ಲಿ ಪ್ರಶಂಸೆಯ ಪ್ರಕಾರವಾಯಿತೋ ನಾ ತಿಳಿಯೆ. ಈ ಕೃತಿಯಿಂದ ಗ್ರಂಥಕರ್ತರ ಕೀರ್ತಿ ವಿಸ್ತಾರವಾಗುವದೆಂದು ನಾನು ತಿಳಿದಿದ್ದೇನೆ.

—**ದ. ರಾ. ಬೇಂದ್ರೆ.**

ಹೊಸಗನ್ನಡ ಸಾಹಿತ್ಯಾಚಾರ್ಯ

**ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರರಿಗೆ**

ಅರ್ಪಿಸಿದೆ



ಹಲಸೂರಿನ ಕೆರೆ ಚಿತ್ರಕಾರರು—ಡಾ. ಸೀತಾರಾಮರಾಯರು.

(ಕೆನ್‌ಸಿಂಗ್‌ಟನ್ ಪಾರ್ಕಿನಲ್ಲಿನ ತಮಾಲತಲ ಶಿಲಾಸನದಲ್ಲಿ ಕುಳಿತಾಗ ಎದುರೊಳು ಕಾಣುವ ನೋಟ)

## ಸಂಸ್ಕೃತದಿಂದ

ದೀರ್ಘಿಕಾಂ ಪ್ರಾವೃತಾಂ ಪಶ್ಯ ತೀರಜೈಃ ಸಿಂದುವಾರಕೈಃ ।
ಪಾಂಡುರಾಂಶುಕಸಂವೀತಾಂ ಶಯಾನಾಂ ಪ್ರಮದಾಮಿವ ॥

(ಅಶ್ವಘೋಷಸ್ಯ)

[ನೋಡು: ತೀರದ ಸಿಂದುವಾರದ ಸಾಲುಪೊದೆಗಳು ಕವಿದಿರೆ,
ಬಿಳಿದುಕೂಲವ ಹೊದೆದು ಮಲಗಿದ ಪ್ರಮದೆಯಂದದ ಕೊಳವನು.]

*　　　*　　　*

ಪ್ರಚಂಡವಾತೋಪರಮೇನ ನಿಶ್ಚಲಂ
ಪ್ರಸನ್ನಮಂತರ್ಜಲದೃಷ್ಟತಾರಕಂ ।
ಸಹೈವ [ವೃ] ಷ್ಟ್ಯಾ ಪತಿತಂ ಮಹೀತಲೇ
ಸರೋ ನಭಃಖಂಡಮಿವ ವ್ಯರಾಜತ ॥

(ಕುಮಾರದಾಸಸ್ಯ)

[ಚಂಡಮಾರುತವುಡಗಿ ನಿಶ್ಚಲತೆ ನೆಲಸೆ,
ತಿಳಿಯಾದ ನೀರೊಳಗೆ ತಾರೆಗಳು ಮಿನುಗೆ,
ಬಿರುಮಳೆಯ ಜೊತೆಯೊಳೇ ಭೂತಲಕೆ ಬಿದ್ದ
ನಭದ ತುಣುಕಂತೆ ಕೆರೆ ಕಂಗೊಳಿಸಿತು.]

ತೀ. ನಂ. ಶ್ರೀ.

# ಕೆನ್‌ಸಿಂಗ್‌ಟನ್ ಪಾರ್ಕಿನಲ್ಲಿ

(ಶ್ರೀ. ಗೋ. ಕೃ. ಅವರೊಡನೆ ತಮಾಲತಲ ಶಿಲಾತಲದಮೇಲೆ ಕುಳಿತು ಸಲ್ಲಾಪಗೈದ ಸಂಜೆಯ ನೆನಪು)

ಎದುರು ಬಾನ ತೀರದಲ್ಲಿ
ರಾಶಿ ರಾಶಿ ಹೊನ್ನ ಚೆಲ್ಲಿ
ಸರಿಯುತಿಹಳು ಸಂಜೆ ಕೆಳೆಯ
ಸ್ವರ್ಣ ಲುಬ್ಧಮಾಗಿ ಎಲೆಯ
ಕೈಗಳಿಂದ ಬೊಗಸೆ ಆಯ್ದು
ಹಳುವಿಹುದಿಕೋ ಹುಯಿಲ ಗೆಯ್ದು
ಇದನು ಕಂಡು ಕೊಂಕು ಚಂದ್ರ
ನಗುತಿಹನದೊ ಮುಗಿಲಿನಿಂದ
ಕೊನೆ ಆರಿಕೆ ನಾಣ್ಯದಂತೆ
ಸ್ವರ್ಣಲೇಖೆ ಅಳಿಯಿತು
ತಣಿವರಿಯದ ತೃಷ್ಣೆಯಂತೆ
ಬನವ ಕತ್ತಲಡಸಿತು.
ಕದಡು ನೀರು ತಿಳಿವ ತೆರದಿ
ನೀಲವಾಯ್ತು ಬಾನ ಶರಧಿ
ತಲದಿ ಹೊಳೆವ ಶುಕ್ತಿಯಂತೆ
ಕಾಣಬಹುವು ಚುಕ್ಕಿಸಂತೆ
ಮೆಲುಮೆಲ್ಲನೆ ಬೆಳಕ ಹೀರಿ
ಇಳಿವಳಿರುಳು ತಿರೆಯ ಸಾರಿ
ಸ್ತಬ್ಧವಾಗುತಿಹುದು ಸೃಷ್ಟಿ
ದಿವಕಾಗಲು ದಿವ್ಯದೃಷ್ಟಿ
ಒಲಿದವರೀ ಉಪವನದೊಳು
ಪ್ರಕೃತಿ ಪುರುಷರಂದದಿ
ತಮ್ಮನರಿಯೆ ಜಗವ ಮರೆಯೆ
ನೆರೆವರೇಕಾಂತದಿ.

ದಿಟವಾಗಿಯು ಚೆಲುವ ತಾಣ
ಈ ಪ್ರಶಾಂತ ಕ್ರೀಡಾವನ
ಹಲಸೂರಿನ ಕೆರೆಗೆ ನೆರವು
ಮುಗಿಲೆ ಎನ್ನೆ ನೀರೆ ಹರವು
ಮೇಲು ಕೆಳಗು ನಿರಾಧಾರ-
ವೆನೆ ಬಿಂಬಿಪ ಸರಸ್ತೀರ
ಶಿವನ ಡಮರುವಂತೆ ತರುವು
ನೆಳಲಿನೊಡನೆ ಬೆರೆವ ಚೆಲುವು
ಕುಡಿವರಿಯುವ ಕಲ್ಪಲತೆಯ
ಹೋಲ್ವ ದೀಪವಲ್ಲರಿ
ಕೆಳಗೆ ತೇಲ್ವ ಅರಿಲ ಹೂವ
ನಂದನಕಾಯ್ತುಚ್ಚರಿ.
ಅಕ್ಕೊ ಆ ಹಿರಿಯ ಮರದ
ಮುಡಿಯ ಮೇಲೆ ಬೆಳ್ಳಿಯಿಹುದ
ಕಡಲ ನಡುವೆ ನಿಂತ ಮಹಾ-
ಫಣಿಯ ಮಣಿಯ ತೆರದೊಳಹಾ
ವಿಸ್ಮಯಕರವೀ ದರ್ಶನ
ಮಲಗಿಹನೋ ಮಧುಸೂದನ
ವನದ ಶ್ಯಾಮಗರ್ಭದಲ್ಲಿ
ಹೊಂಗನಸಿನ ಪ್ರಭೆಯ ಚೆಲ್ಲಿ
ತನ್ನ ಸುತ್ತ ನಿದ್ದೆಯಾಚೆ
ಆದಿಶೇಷ ತಲ್ಪದೊಳ್
ದೆಸೆಯಾಚೆಗೆ ಲಯಕೆ ಸಂದ
ತಿರೆಯ ಸೃಷ್ಟಿಕಲ್ಪದೊಳ್.

ದಿಟ ಸುಂದರವೀ ಉಪವನ
ನೀನೊಲಿದಂತೆನ್ನಯ ಮನ
ತೃಪ್ತವಾಯ್ತು ಚೆಲುವ ಹೀರಿ
ನನಸಿನ ತೆರೆಮರೆಗೆ ಜಾರಿ
ಆತ್ಮವಂತರಿಲ್ಲಿ ದಿಟವು
ಆತ್ಮಮಗ್ನ ರಾಗಲಳವು
ಈ ತಾಣಕೆ ಬಹ ವಿದಗ್ಧ
ಆಗಬಹುದು ಭಾವಮುಗ್ಧ
ಒಲಿದ ಮಂದಿ ತಮ್ಮ ಕನಸ
ಇಲ್ಲಿ ಮಾಡಬಹುದು ನನಸ
ಜಲದೆದೆಯೊಳು ಸೃಷ್ಟಿ ಇಲ್ಲಿ
ಸ್ನಿಗ್ಧವಪ್ಪ ತೆರದೊಳು
ಕವನವೊಂದು ಮೂಡಬಹುದು
ಇಲ್ಲಿ ಕವಿಯ ಬಗೆಯೊಳು.

ಶ್ರೀ. ಗೋ. ಕೃ. ಅವರಿಗೆ]

—ಪು. ತಿ. ನ.

# ಪರಿವಿಡಿ

# ಕೆನ್‌ಸಿಂಗ್‌ಟನ್ ಪಾರ್ಕ್

ಮೂರು ವರ್ಷಗಳಿಂದೀಚೆಗೆ ಕಚೇರಿಯ ಕೆಲಸ ಮುಗಿದೊಡನೆ ಕೆನ್‌ಸಿಂಗ್‌ಟನ್ ಪಾರ್ಕಿನ ಕಡೆಗೆ ತೆರಳುವುದು ವಾಡಿಕೆಯಾಗಿ ಹೋಗಿದೆ. ಸಂಜೆ ಇನ್ನೆಲ್ಲಿಗೆ ಹೋಗುವುದಕ್ಕೂ ಮನಸ್ಸು ಬರುವುದಿಲ್ಲ. ಕೆನ್‌ಸಿಂಗ್‌ಟನ್ ಪಾರ್ಕಿಗೆ ಹೋಗಿ, ಸಂಜೆಯನ್ನಲ್ಲಿ ಕಳೆದು, ರಾತ್ರಿ ಎಂಟು ಘಂಟೆಗೆ ಮನೆಗೆ ಹಿಂದಿರುಗಿದೆನೆಂದರೆ ಆಗ ಮನಸ್ಸು ಎಷ್ಟೋ ಹಗುರವಾಗಿರುವುದು. ಕಚೇರಿ ಕೆಲಸದ ಶೇಷವೊಂದೂ ಮನದಲ್ಲುಳಿದಿರುವುದಿಲ್ಲ. ಅದರಿಂದಲೇ ಸಂಧ್ಯಾಕಾಲದಲ್ಲಿ ಇತರರು ಇತ್ತ ಆಹ್ವಾನಗಳನ್ನು ಮನ್ನಿಸುತ್ತಿಲ್ಲ. ಅದಕ್ಕೋಸ್ಕರ ಅನೇಕರು ನನ್ನ ವಿಷಯದಲ್ಲಿ ತಪ್ಪು ತಿಳಿದುಕೊಂಡಿದ್ದಾರೆ. ಅನೇಕ ಕಡೆಯಿಂದ ಆಕ್ಷೇಪಣೆಯೂ ಬಂದಿದೆ. ಪರಿಷತ್ತಿನ ನನ್ನ ಕೆಲವು ಮಿತ್ರರು ಪರಿಷತ್ತಿನಲ್ಲಿ ನಡೆಯುವ ಭಾಷಣ ಮೊದಲಾದ ಸಮಾರಂಭಗಳಿಗೆ ಬರುತ್ತಿಲ್ಲವೆಂದು ಆಕ್ಷೇಪಿಸಿದ್ದಾರೆ. ನನ್ನ ಕ್ಲಬ್ಬನ್ನೇ ನಾನು ಮರೆತುಬಿಟ್ಟದ್ದೇನೆ; ಅಲ್ಲಿನ ಆಟಪಾಟಗಳಲ್ಲಿ ಭಾಗಿಯಾಗುತ್ತಿಲ್ಲವೆಂದು ನನ್ನ ಸಹೋದ್ಯೋಗಿಗಳು ಪ್ರತಿನಿತ್ಯವೂ ನನ್ನನ್ನು ಅಲ್ಲಗಳೆಯುತ್ತಿದ್ದಾರೆ. ಮನೆಗೆ ಬಂದು ಮಕ್ಕಳನ್ನೊಡಗೂಡಿ ಲಾಲ್‌ಬಾಗಿಗೆ ಯಾಕೆ ಹೋಗಬಾರದು; ಕೆನ್‌ಸಿಂಗ್‌ಟನ್ ಪಾರ್ಕಿನಲ್ಲಿ ನಿಮಗೆ ಏನಿದೆ? ಅಲ್ಲಿ ಯಾರು ನಿಮ್ಮನ್ನು ಒಲಿಸಿದ್ದಾಳೆ?—ಎಂದು ನನ್ನ ಸಹಧರ್ಮಿಣಿಯೇ ನನ್ನನ್ನು ಹಾಸ್ಯ ಮಾಡುತ್ತಿರುತ್ತಾಳೆ. ಕೆನ್‌ಸಿಂಗ್‌ಟನ್ ಪಾರ್ಕಿಗೂ ನನ್ನ ಮನೆಗೂ ಸುಮಾರು ಎಂಟು ಮೈಲಿಗಳಾಗುತ್ತದೆ. ಆದರೂ ಸಂಜೆಯಾಯಿತೆಂದರೆ ನಾನಾಯಿತು; ಕೆನ್‌ಸಿಂಗ್‌ಟನ್ ಪಾರ್ಕಾಯಿತು.

ನನ್ನ ವ್ಯಾಸಂಗ ಮುಗಿದು ಕೆಲಸಕ್ಕೆ ಸೇರುವ ಮೊದಲು ನಮ್ಮ ನಾಡಿನ ಹಿರಿಯರೊಬ್ಬರು ನನ್ನನ್ನು ತಮ್ಮ ಮನೆಗೆ ಬರಮಾಡಿಕೊಂಡು ಪುಷ್ಕಳವಾಗಿ ಭೋಜನ ಮಾಡಿಸಿ ಮುಂದೆ ಜೀವನದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ವಿಷಯದಲ್ಲಿ ಕೆಲವು ಬುದ್ಧಿವಾದಗಳನ್ನು ಹೇಳಿದ್ದರು. ಅದರಲ್ಲಿ ಒಂದು 'ನೀನು ಮಾರನೆಯ ದಿನ ಮಾಡಬೇಕೆಂದಿರುವ ಕೆಲಸಗಳನ್ನೆಲ್ಲಾ ಹಿಂದಿನ ದಿನ ಮಲಗಿಕೊಳ್ಳುವ ಮೊದಲು ಯೋಚಿಸಿ

ಇಂತಿಂತಹದನ್ನು ಮಾಡಿಬಿಡಬೇಕೆಂದು ಮನದಲ್ಲಿ ಅಂದುಕೊಂಡು ಮಲಗಿಕೊ. ಮಾರನೆಯ ದಿನ ಅವುಗಳು ಆಯಾ ಹೊತ್ತಿಗೆ ಸುಸೂತ್ರ ವಾಗಿ ನಡೆದುಹೋಗುತ್ತಿರುತ್ತವೆ' ಎಂದು. ಇದು ನನ್ನ ಅನುಭವಕ್ಕೆ ಈಗ ಚೆನ್ನಾಗಿ ಬರುತ್ತಿದೆ. ಸಂಜೆಯಾದೊಡನೆ ನನ್ನ ಬೈಸಿಕಲ್ಲು ನಾನರಿಯದಂತೆಯೇ ನನ್ನನ್ನು ಕೆನ್‌ಸಿಂಗ್‌ಟನ್ ಪಾರ್ಕಿಗೆ ತಂದು ಬಿಟ್ಟಿರುತ್ತದೆ. ಈ ಕೆನ್‌ಸಿಂಗ್‌ಟನ್ ಪಾರ್ಕಿಗೂ ನನ್ನ ಜೀವನಕ್ಕೂ ನಿಕಟವಾದ ಸ್ನೇಹ ಬೆಳೆದುಹೋಗಿದೆ. ಬೆಂಗಳೂರಿನಲ್ಲಿ ಅನೇಕ ಪಾರ್ಕು ಗಳಿವೆ. ರಮ್ಯವಾದ ಲಾಲ್‌ಬಾಗಿದೆ, ಕಚೇರಿಯ ಹತ್ತಿರದಲ್ಲಿಯೇ ಕಬ್ಬನ್ ಪಾರ್ಕಿದೆ. ಆದರೆ ಅವುಗಳೆಲ್ಲದರಲ್ಲಿಯೂ ಸಂಜೆಯಲ್ಲಿ ಗದ್ದಲ. ಮನುಷ್ಯರು, ಮೋಟಾರುಗಳು! ಅಬ್ಬಾ ಶಾಂತಿ? ಎಲ್ಲಿ ಸಿಗುವುದು ಅಲ್ಲಿ ಶಾಂತಿ!

ಕೆನ್‌ಸಿಂಗ್‌ಟನ್ ಪಾರ್ಕಿನಲ್ಲಿನ ಆವರಣವೇ ಬೇರೆ. ಪಾರ್ಕಿನ ಪೂರ್ವಕ್ಕೆ ಎವರ್ ಗ್ರೀನ್ ಮರಗಳ ಸಾಲು; ಪಶ್ಚಿಮದಲ್ಲಿ ಸಿಲ್ವರ್ ಓಕ್ ಮತ್ತು ತಂಗಡಿ ಗಿಡಗಳ ಸಾಲು. ಅದರ ಮುಂದೆ ಪಾರ್ಕಿನ ಉದ್ದಕ್ಕೂ ಚಾಚಿದೆ ಹಲಸೂರಿನ ಕೆರೆ. ಕೆರೆಯಲ್ಲಿ ಮೂರು ದ್ವೀಪ ಗಳುಂಟು. ಆ ಮೂರು ದ್ವೀಪಗಳಲ್ಲೂ ದಟ್ಟವಾಗಿ ಬೆಳೆಯಿಸಿದ ಮರ ಗಳು. ನಡುದ್ವೀಪದಲ್ಲಿನ ಮರಗಳ ಕೊಂಬೆ ಕೂಡಿ ಒಂದು ಚಪ್ಪರ ದಂತಾಗಿದೆ—ಅಲ್ಲ ಮಂಟಪದಂತಿದೆ. ಮತ್ತೆ ಎರಡು ದ್ವೀಪಗಳೂ ಕುದುರೆಯ ಲಾಳದಾಕೃತಿಯಲ್ಲಿವೆ. ಅವುಗಳಲ್ಲಿನ ಮರಗಳು ತಮ್ಮ ಕೊಂಬೆಗಳನ್ನು ನೀರಿನೊಳಕ್ಕೆ ಚಾಚಿವೆ.

ಕೆರೆಯ ಒಂದು ಅಂಚಿಯಲ್ಲಿ ದೊಡ್ಡದೊಂದು ಬಂಡೆ. ಅದರ ಮೇಲೆ ಕೆಂಫೇಗೌಡನ ಗೋಪುರ. ಮತ್ತೊಂದು ಅಂಚಿನಲ್ಲಿ ಕಾಣಿಸು ವುದು ಮಹಾ ಯುದ್ಧದಲ್ಲಿ ಮಡಿದ ವೀರರ ಜ್ಞಾಪಕಾರ್ಥಕ್ಕಾಗಿ ನಿಲ್ಲಿಸಿ ರುವ ಸ್ತಂಭ. ಕೆರೆಯ ಸುತ್ತಲೂ ಬೀದಿ. ಎದುರು ಬೀದಿಯ ಸಾಲು ಮರಗಳು — ತೆಂಗಿನಮರಗಳು. ಪಾರ್ಕಿನಲ್ಲಿ ಕುಳಿತವರಿಗೆ ಒಂದು ಕಡೆ ಚರ್ಚು ಕಂಡುಬಂದರೆ ಮತ್ತೊಂದುಕಡೆ ಕಾಣಬರುವುದು — ದೇಗುಲ. ಒಂದುಕಡೆಯಿಂದ ಚರ್ಚಿನ ಘಂಟಾನಾದ ಕೇಳಿಬರುತ್ತಿದ್ದರೆ

ಮತ್ತೊಂದುಕಡೆಯಿಂದ ಕೇಳಿಬರುವುದು ದೇಗುಲದ ನಾಗಸ್ವರದ ಇಂಚರ. ಪಾರ್ಕಿನ ಹಿಂದುಗಡೆ ಕ್ರಿಶ್ಚಿಯನ್ ಹುಡುಗಿಯರ ಮತ್ತು ಮಕ್ಕಳ ಬೋರ್ಡಿಂಗ್ ಹೋಂ ಇದೆ. ಅಲ್ಲಿಂದ ಯಾವಾಗಲೂ ಕೇಳಿ ಬರುವುದು ಮಕ್ಕಳ ಕಲಕಲಧ್ವನಿ; ಹುಡುಗಿಯರ ಮೇಳದ ಗಾನ. ಅವು ಪಾರ್ಕಿನ ಆವರಣಕ್ಕೇ ಒಂದು ಇಂಬುಗೊಟ್ಟಿದೆ.

ಕೆರೆಯಲ್ಲಿ ಯಾವಾಗಲೂ ತಾವರೆ, ಕನ್ನೈದಿಲೆ. ಇಲ್ಲಿ ನಾನು ನೋಡಿರುವಷ್ಟು ಕೊಕ್ಕರೆಯೇ ಮೊದಲಾದ ನೀರು ಹಕ್ಕಿಗಳನ್ನು ಇನ್ನೆಲ್ಲೂ ನೋಡಿಲ್ಲ. ಆ ಶ್ವೇತಪಕ್ಷಿಗಳು ಒಟ್ಟಿಗೆ ದ್ವೀಪದಲ್ಲಿರುವ ಮರಗಳ ಮೇಲೆ ಕುಳಿತಿರುವುದನ್ನು ನೋಡಿದರೆ ನೀರಿನಲ್ಲಿ ಆ ದ್ವೀಪ ಆದಿಶೇಷನ ಶಯ್ಯೆ, ಮೇಲೆ ಶ್ವೇತಛತ್ರಿ....ಹೀಗೆ ಏನೇನೋ ಮನಸ್ಸಿಗೆ ತೋರಿಬರುವುದು. ಮನಸ್ಸು ಹಗುರವಾಗುವುದು. ನೀರಿನಲ್ಲಿ ಜಲ ರೇಖೆಯನ್ನು ನಿರ್ಮಿಸುತ್ತ ಸಂಚರಿಸುವ ಪುಟ್ಟ ಹಕ್ಕಿಗಳನ್ನು ನೋಡ ಬೇಕು. ಅವುಗಳ ಆಟ; ಓ ಏನು ಆನಂದ!

ಪಾರ್ಕಿನಲ್ಲಿ ನಾನು ಯಾವಾಗಲೂ ಕುಳಿತುಕೊಳ್ಳುವ ತಾಣ ಹೊಂಗೆಯ ಮರದಡಿಯಲ್ಲಿ, ಶಿಲಾಪೀಠದ ಮೇಲೆ. ಸಂಜೆ ನನ್ನ ತಾಣದಲ್ಲಿ ಕುಳಿತೆನೆಂದರೆ ಎದುರಿಗೆ ಅಸ್ತಸಮಯದ ಸೂರ್ಯಕಿರಣಗಳು ಮೋಡ ಗಳಲ್ಲಿ ತೂರಿ ಆಗಸವನ್ನೆಲ್ಲಾ ಆವರಿಸಲು, ಸೂರ್ಯ ಅಸ್ತಮಿತನಾದ ಹಾಗೆಲ್ಲಾ ಅಲ್ಲಿ ತಳಿಗೊಳ್ಳುವ ವಿವಿಧ ವರ್ಣಗಳ ಭವ್ಯನೋಟ ಕಾಣು ವುದು. ಒಮ್ಮೆಯೇ ನಮ್ಮನ್ನು ಭಾವನಾಪ್ರಪಂಚಕ್ಕೆ ಕರದೊಯ್ಯುವುದು. ಸಂಧ್ಯಾಕಾಲದಲ್ಲಿ ಇಲ್ಲಿ ಹೀಗೆ ಕುಳಿತು ಎಷ್ಟೊ ವಿಷಯಗಳನ್ನು ಇಲ್ಲಿ ಯೋಚಿಸಿ ಬಗೆಹರಿಸಿಕೊಂಡಿದ್ದೇನೆ. ಇದೇ ಸ್ಥಳದಲ್ಲಿ ಕುಳಿತು ನಾನೆಷ್ಟೊ ಕತೆಗಳನ್ನು ಬರೆದಿದ್ದೇನೆ. ದೋಣಿಯನ್ನು ತೆಗೆದುಕೊಂಡು ಕೆರೆಯಲ್ಲಿ ಸುತ್ತುತ್ತಾ ಎಷ್ಟೊ ಕವನಗಳನ್ನು ಕಟ್ಟಿ ಹಾಡಿಕೊಂಡಿದ್ದೇನೆ. ನನ್ನ ದುಃಖಗಳನ್ನೆಷ್ಟೊ ಇಲ್ಲಿನ ಈ ಜಲದಲ್ಲಿ ಹುದುಗಿಸಿಟ್ಟಿದ್ದೇನೆ.

ಹೊರಗಿನಿಂದ ಬೆಂಗಳೂರಿಗೆ ನನ್ನ ಸ್ನೇಹಿತರಾರಾದರೂ ಬಂದರೆ ಅವರನ್ನು ಮೊದಲು ಇಲ್ಲಿಗೆ ಕರೆದೊಯ್ಯುವೆ. ಇಲ್ಲಿ ದೋಣಿಯಲ್ಲಿ ಕೂಡಿಸಿ ದ್ವೀಪಗಳಿಗೆ ಕರೆದೊಯ್ದು ಅಲ್ಲಿ ಅವರಿಗೆ ಆತಿಥ್ಯವನ್ನಿತ್ತರೆ

ಆಗ ನನ್ನ ಮನಸ್ಸಿಗೆ ತೃಪ್ತಿ. ಒಬ್ಬ ನನ್ನ ಸ್ನೇಹಿತ ಯೂರೋಪನ್ನೆಲ್ಲಾ ಸುತ್ತಿದ್ದಾನೆ. ಅವನು ಹಿಂದುಸ್ಥಾನದ ಸರ್ಕಾರದಲ್ಲಿ ದೊಡ್ಡ ಹುದ್ದೆಯಲ್ಲಿರುವುದರಿಂದ ಹಿಂದೂದೇಶದಲ್ಲಿ ಅವನು ನೋಡದೆ ಇರುವ ಸ್ಥಳಗಳೇ ಇಲ್ಲ. ಅವನನ್ನು ನಾನು ಇಲ್ಲಿಗೆ ಕರೆದುಕೊಂಡು ಬಂದಾಗ ಇಲ್ಲಿನ ಪ್ರಕೃತಿಸೌಂದರ್ಯ ಮತ್ತು ಆವರಣವನ್ನು ನೋಡಿ ಮುಗ್ಧನಾಗಿ ದ್ವೀಪದಲ್ಲಿದ್ದ ಒಂದು ಮರದ ಬುಡದಲ್ಲಿ ಕುಳಿತು 'ಓಂ ಶಾಂತಿಃ ಶಾಂತಿಃ' ಎಂದು ಹೇಳುತ್ತಾ ಭಾವಪರವಶನಾಗಿಬಿಟ್ಟ. ಅವನು ಬೆಂಗಳೂರನ್ನು ಬಿಟ್ಟು ತೆರಳುವಾಗ ನನಗೆ ಹೇಳಿದ ಕೊನೆಯ ಮಾತುಗಳಿವು: 'ಗೋಪಾಲ್, ನೀನು ನಿಶ್ಚಯವಾಗಿಯೂ ಅದೃಷ್ಟವಂತ. ಕೆನ್‌ಸಿಂಗ್‌ಟನ್ ಪಾರ್ಕಿನ ಸ್ನೇಹ ನಿನಗೆ ದೊರೆತಿರುವುದು ನಿನ್ನ ಸುಕೃತ. ನಾನೂ ಎಂದಿಗೂ ನಿನ್ನ ಪಾರ್ಕನ್ನು ಮರೆಯುವಹಾಗಿಲ್ಲ' ಎಂದು.

ಇನ್ನು ಈ ಪಾರ್ಕಿಗೆ ಬರುವ ಕೆಲವು ವ್ಯಕ್ತಿಗಳ ಪರಿಚಯ ನಾನು ತಮಗೆ ಮಾಡಿಕೊಡಬೇಕೆಂದೆನಿಸುತ್ತದೆ. ಈ ಪಾರ್ಕಿಗೆ ಅನೇಕ ಜನರೇನೂ ಬರುವುದಿಲ್ಲ. ಇಲ್ಲಿಗೆ ಪ್ರತಿನಿತ್ಯವೂ ಬರುವವರೆಂದರೆ ಒಬ್ಬ ಮೌಲ್ವಿ, ಕೆಲವು ಕ್ರಿಶ್ಚಿಯನ್ ಪಾದ್ರಿಗಳು, ರಾಮಕೃಷ್ಣ ಮಠದ ಕೆಲವು ಭಕ್ತರು. ಅವರೆಲ್ಲರೂ ವೃದ್ಧರು; ಪೆನ್‌ಷನ್‌ದಾರರು. ಆಗಾಗ ಕೆಲವು ಆಂಗ್ಲ ದಂಪತಿಗಳೂ ಬರುವುದುಂಟು.

ಮೌಲ್ವಿಯು ಯಾವಾಗಲೂ ಕುರಾನನ್ನು ಪಠಿಸುತ್ತಾ ಪಾರ್ಕಿನಲ್ಲಿ ತಿರುಗುತ್ತಿರುತ್ತಾನೆ. ಮೂರು ವರ್ಷಗಳಿಂದಲೂ ನಾನು ಅವನನ್ನು ನೋಡುತ್ತಿದ್ದೇನೆ. ಅವನು ನನ್ನನ್ನು ನೋಡುತ್ತಿದ್ದಾನೆ. ಆದರೆ ಒಂದು ದಿನವೂ ಒಬ್ಬರೊಡನೊಬ್ಬರು ಮಾತನಾಡಿಲ್ಲ. ಆ ಆಂಗ್ಲ ಪಾದ್ರಿಗಳು ಕೆಲವು ಸಲ ನನ್ನೊಡನೆ ಯೋಗಕ್ಷೇಮ ಮಾತನಾಡಿದ್ದಾರೆ. ರಾಮಕೃಷ್ಣ ಮಠದವರು ಅನೇಕ ವೇಳೆ ನನ್ನೊಡನೆ ವೇದಾಂತ ವಿಚಾರವಾಗಿ ಮಾತನಾಡಿದ್ದಾರೆ. ಮೌಲ್ವಿಗೆ ತಾನಾಯಿತು; ಅವನಾಯಿತು. ಪಾದ್ರಿಗಳೋ ತಮ್ಮತಮ್ಮಲ್ಲಿಯೇ ಗುಸುಗುಸು ಮಾತನಾಡುತ್ತಿರುತ್ತಾರೆ. ರಾಮಕೃಷ್ಣಮಠದವರ ವಾದವಿವಾದಕ್ಕೆ ಕಡೆಯೇ ಇಲ್ಲ. ಇವರನ್ನೆಲ್ಲಾ ಕಂಡಾಗ ನನಗೆ ಶ್ರೀರಾಮಕೃಷ್ಣಪರಮಹಂಸರು ಹೇಳಿದ ಒಂದು ಕತೆ

ನೆನಪಿಗೆ ಬರುತ್ತದೆ. 'ಸೊಗಸಾದ ಹಣ್ಣು ಹೂ ಒಳಗೊಂಡ ಮರಗಳಿರುವ ಉದ್ಯಾನದಲ್ಲಿ ಕೆಲವರು ಕುಳಿತು ಕೇವಲ ಹಣ್ಣುಗಳು ಎಷ್ಟಿವೆ, ಹೂವುಗಳು ಎಷ್ಟಿವೆ ಎಂದು ಎಣಿಸುವುದರಲ್ಲೇ ಕಾಲವನ್ನು ಕಳೆದುಬಿಡುತ್ತಾರೆ. ಬುದ್ಧಿವಂತನು ಒಂದು ಮಾತನ್ನೂ ಆಡದೆ ಹಣ್ಣುಗಳನ್ನು ಸವಿದು ಸುಖಪಡುತ್ತಿರುತ್ತಾನೆ.' ಇದು ಇವರ ಸ್ಥಿತಿ.

ಈ ವರ್ಷದ ಜನವರಿ ಮೊದಲನೆಯ ದಿನ. (ಕ್ರಿಸ್ತರ ಹೊಸ ವರ್ಷದ ಆರಂಭ) ಈ ದಿನ ರಜವಿದ್ದುದರಿಂದ ನಾನು ಬೆಳಿಗ್ಗೆಯೇ ಪಾರ್ಕಿಗೆ ಬಂದು ಜೆ.ಎಂ. ಬ್ಯಾರಿಯ 'ಪೀಟರ ಪ್ಯಾನ'ನ್ನು ಓದುತ್ತಾ ಕುಳಿತಿದ್ದೆ. ಮಿ. ಹಡ್ಸನ್ ಎಂಬ ಐರಿಷರವನೊಬ್ಬ ನಾನಿದ್ದೆಡೆಗೆ ಬಂದು ಹೊಸವರ್ಷದಲ್ಲಿ ಶುಭವಾಗಲೆಂದು ಹಾರೈಸಿ ಮಾತನಾಡುತ್ತ ಕುಳಿತುಕೊಂಡ. ಈ ದಿನವೇ ಮೊದಲಸಲ ನಾನವನನ್ನು ಕಂಡಿದ್ದು ; ಅವನೊಡನೆ ಮಾತನಾಡಿದ್ದು. ಈ ದಿನ ನಾನು ದಟ್ಟಿ ಪಂಚೆಯನ್ನುಟ್ಟು ಷರಟಿನ ಮೇಲೆ ಬರಿ ಕೋಟೊಂದನ್ನು ತಗಲಿಸಿಕೊಂಡಿದ್ದೆ. ತಲೆಯ ಕೂದಲು ಕೆದರಿತ್ತು ; ಬೆಳಿಗ್ಗೆ ತಾನೆ ಎಣ್ಣೆ ಹಚ್ಚಿ ಎರೆದುಕೊಂಡಿದ್ದುದರಿಂದ ತಲೆಯ ಕೂದಲು ನನ್ನ ಹದ್ದಿಗೆ ಸಿಕ್ಕುವಂತಿರಲಿಲ್ಲ. ನನ್ನ ರೂಪನ್ನು ನೋಡಿ ಅವನು ನನ್ನನ್ನು ಅಲ್ಲಿ ಹತ್ತಿರದಲ್ಲಿಯೇ ಇದ್ದ ಸಿಗರೇಟು ಕಾರ್ಖಾನೆಯ ಕೂಲಿಗಾರನೆಂದು ತಿಳಿದುಕೊಂಡನೇನೊ! 'ಇಂದು ಶುಭದಿನ, ಕ್ರಿಸ್ತನ ಪುಣ್ಯದಿನ. ನೀನು ಮನೆಗೆ ಹೋಗಿ ಬೈಬಲಿನ ಇಷ್ಟನೆಯ ಪುಟವನ್ನು ತೆರೆದು ಈ ಈ ಭಾಗಗಳನ್ನು ಪಠಿಸು. ನಿನ್ನ ಆತ್ಮೋದ್ಧಾರವಾಗಲೆಂದು ಕ್ರಿಸ್ತನ ಮೂಲಕ ದೇವರಲ್ಲಿ ಪ್ರಾರ್ಥನೆಯಿಡು, ಕ್ರಿಸ್ತನೊಬ್ಬನೆ ನಮ್ಮನ್ನು ಉದ್ಧರಿಸಬಲ್ಲನು' ಎಂದು ಹೇಳತೊಡಗಿದ. ಅವನು ತಮ್ಮ ಯುಗಾದಿಯ ದಿನ ಪುಣ್ಯ ಕೆಲಸ ಮಾಡುತ್ತಿದ್ದೇನೆಂದು ನಂಬಿ ನನಗೆ ಅಷ್ಟು ಶ್ರದ್ಧೆಯಿಂದ ಹೇಳುತ್ತಿದ್ದ. ಅವನ ಉತ್ಸಾಹಕ್ಕೆ ಭಂಗ ತರಬಾರದೆಂದು ನಾನು ಸುಮ್ಮನೆ ಕೇಳುತ್ತಿದ್ದೆ. ಅವನಿಗೆ ಮತ್ತೆ ನಾನು ದೇಶಿ ಕ್ರಿಸ್ತನಲ್ಲವೆಂದು ಹೇಗೋ ತೋರಿತೆಂದು ಕಾಣುತ್ತದೆ. 'ನಿನ್ನಲ್ಲಿ ಬೈಬಲ್ಲಿಲ್ಲದಿದ್ದರೆ ನಾನು ನಿನಗೊಂದು ದಾನ ಮಾಡುತ್ತೇನೆ. ಅದು ವೇದಗ್ರಂಥ. ನಿನಗೆ ನಿಮ್ಮ ವೇದ ಓದಿ ತಿಳಿದು

ಕೊಳ್ಳಲಾಗುವುದಿಲ್ಲ. ನಮ್ಮ ವೇದವನ್ನು ಓದು. ನಿಮ್ಮ ಮತ....' ಹೀಗೆ ಹೇಳುತ್ತ ಹೇಳುತ್ತಾ ಹಿಂದೂ ಮತ, ಇಸ್ಲಾಂ ಮತ ಎಲ್ಲವನ್ನೂ ಖಂಡಿಸುವುದಕ್ಕೇ ಹೊರಟ; ಅಷ್ಟೇ ಅಲ್ಲ; ಅವುಗಳ ದೂಷಣೆಗೆ ಆರಂಭಿಸಿದ. ನಾನಿನ್ನು ಸುಮ್ಮನಿರುವುದು ಸರಿಯಲ್ಲವೆಂದು ತೋರಿತು. ಅವನಿಗೆ ಆಗ ಹೇಳತೊಡಗಿದೆ. 'ನಾನೂ ಬೈಬಲ್ಲನ್ನು ಶ್ರದ್ಧೆಯಿಂದ ಓದಿದ್ದೇನೆ. ಕೊರಾನಿನ ಆಂಗ್ಲ ಭಾಷಾಂತರವನ್ನೂ ಓದಿದ್ದೇನೆ. ನಮ್ಮ ಮತಗ್ರಂಥಗಳಷ್ಟೇ ಅಲ್ಲ. ಇತರ ಮತಗ್ರಂಥಗಳನ್ನೂ ಓದಿ ತಿಳಿದುಕೊಳ್ಳಲು ಪ್ರಯತ್ನಪಟ್ಟಿದ್ದೇನೆ. ಎಲ್ಲದರಲ್ಲಿಯೂ ಸಿದ್ಧಿ ಒಂದೇ. ದಾರಿ ಬೇರೆ. ಆಯಾ ದೇಶ ಕಾಲ ಅವುಗಳಿಗನುಗುಣವಾಗಿ ಆಯಾ ಮತದ ವಿಭೂತಿಗಳು ದಾರಿ ಹಾಕಿಕೊಟ್ಟಿದ್ದಾರೆ. ಯಾವ ಮತ ಹೇಗಾದರೂ ಇರಲಿ. ನಾನು ಹಿಡಿದಿರುವ ಹಾದಿ ಇದು. ಸಾಧ್ಯವಾದ ಮಟ್ಟಿಗೂ ನಾನು ಇತರರಿಗೆ ಹೊರೆ ಆಗದಂತೆ ಜೀವನವನ್ನು ತಳ್ಳುವುದು. ನನ್ನ ಮಾತಿನಲ್ಲಾಗಲಿ ಆಚರಣೆಯಲ್ಲಾಗಲಿ ಇತರರ ಮನಸ್ಸಿಗೆ ನೋವುಂಟಾಗದಂತೆ ಎಚ್ಚರಿಕೆಯಿಂದ ವರ್ತಿಸುವುದು. ಇವೆರಡು ಧ್ಯೇಯಗಳೇ ಸಾಕು ನನಗೆ. ನನ್ನಂತಹ ಸಾಮಾನ್ಯರೆಲ್ಲರಿಗೂ ಇಷ್ಟೇ ಸಾಕೆಂದು ಕಾಣುತ್ತದೆ. ಅವರು ಇತರರಿಗೆ ಸಹಾಯ ಮಾಡಲು ಶಕ್ತಿಯಿದ್ದರೆ ಸಹಾಯ ಮಾಡಲಿ. ತನ್ನ ಶಕ್ತಿಮೀರಿ ಸಹಾಯಮಾಡಲು ಹೋಗಿ ತಾನೂ ತೊಂದರೆಯಲ್ಲಿ ಸಿಕ್ಕಿಹಾಕಿಕೊಳ್ಳಬಾರದು. ಅದರಿಂದ ಇತರರಿಗೂ ತೊಂದರೆಯೇ....' ಅವನು ನನಗೆ ಬೋಧಿಸಲು ಪ್ರಾರಂಭಿಸಿದ್ದು ನಾನೇ ಅವನಿಗೆ ಭಾಷಣ ಕೊಡುವಂತಾಯಿತು. ನನಗೇ ಅನ್ನಿಸಿತು, ನನ್ನ ಎಲ್ಲೆ ಮೀರಿ ಹೋಗುತ್ತಿದ್ದೇನೆಂದು. ನಾನು ಪುನಃ ಅವನನ್ನು ಕಾಣುವೆನೆಂದು ಹೇಳಿ ಅಲ್ಲಿಂದ ಹೊರಟುಬಿಟ್ಟೆ. ಈಚೆಗೆ ಅವನನ್ನು ಆಗಾಗ ಕಾಣುತ್ತಿರುತ್ತಿರುತ್ತೇನೆ. ಅವನೂ ಬಹಳ ಗೌರವದಿಂದ ಹತ್ತಿರ ಬಂದು ಅರ್ಧಗಂಟೆಯಾದರೂ ಆ ಈ ವಿಷಯ ಮಾತನಾಡಿಕೊಂಡು ಹೋಗುತ್ತಾನೆ.

ಪಾರ್ಕಿಗೆ ಒಬ್ಬ ಆಂಗ್ಲ ವೃದ್ಧೆ ಬರುತ್ತಾಳೆ. ನಾನಲ್ಲಿ ಏಕಾಂಗಿಯಾಗಿ ಕುಳಿತು ಓದುತ್ತಿರುವುದನ್ನು ಕಂಡು ಹತ್ತಿರಕ್ಕೆ ಬಂದು 'ಏನು

ಪರೀಕ್ಷೆಗೆ ವ್ಯಾಸಂಗ ಮಾಡುತ್ತಿದ್ದೀರೋ ?' ಎಂದು ಕೇಳುತ್ತಾಳೆ. 'ಇಲ್ಲ' ಎಂದರೆ 'ಯಾವ ಪುಸ್ತಕ ತಾವು ಓದುತ್ತಿರುವುದು ?' ಎಂದು ಕೇಳುತ್ತಾಳೆ. 'ನಾಟಕ' ಎಂದು ತಿಳಿಸಿದರೆ 'ಓಹೋ ತಾವು ನಾಟಕ ಓದುತ್ತಿದ್ದೀರಿ, ಕಾದಂಬರಿ ಅಲ್ಲ, ಪರೀಕ್ಷೆಗೆ ತಾವು ಓದುತ್ತಿಲ್ಲ' ಎಂದು ಹೇಳಿಕೊಂಡು ಹೊರಟುಹೋಗುತ್ತಾಳೆ. ಮತ್ತೆ ತಿರುಗಿ ಅವಳನ್ನು ಅಲ್ಲಿ ಕಾಣುತ್ತೇನೆ. ಆಗಲೂ ಅವಳದು ಅದೇ ಪ್ರಶ್ನೆ. 'ಪರೀಕ್ಷೆಗೆ ನೀವು ಓದುತ್ತಿದ್ದೀರಾ ? ಕಾವ್ಯವೇ....' ಸುಮಾರು ಇಲ್ಲಿಗೆ ಇಪ್ಪತ್ತುಸಲ ಅವಳನ್ನಲ್ಲಿ ಕಂಡಿದ್ದೇನೆ ಯಾವಾಗಲೂ ಅವಳು ಹಾಕುತ್ತಿದ್ದ ಪ್ರಶ್ನೆಗಳು ಅವೇ. ಅವಳಿಗೆ ಮಕ್ಕಳು ಗಳಿದ್ದರೇ? ಯಾವನಾದರೂ ಪರೀಕ್ಷೆಗೆ ಓದಿ ಓದಿ ಕೊನೆಗೆ ಅದರಲ್ಲಿಯೇ ಮೃತ್ಯು ಹೊಂದಿದನೇ? ಒಂದು ದಿನ ಅವಳನ್ನು ಕೇಳಿ ತಿಳಿದುಕೊಳ್ಳ ಬೇಕು. ಅವಳ ಹೃದಯದ ಅಂತರಾಳದಲ್ಲಿ ಯಾವ ಹುದುಗು ಇದೆಯೋ! ಯಾರ ಯಾರ ಜೀವನ ಹೇಗೆ ಹೇಗೆ ಇರುತ್ತದೆಯೋ !

ಒಬ್ಬ ಸೇಟು ಪಾರ್ಕಿಗೆ ಬರುತ್ತಾನೆ. ಅವನ ಬಟ್ಟೆ ಬರೆ, ಅವನು ಬರುವ ಮೋಟರು, ಇವುಗಳನ್ನು ನೋಡಿದರೆ ಅವನು ದೊಡ್ಡ ಮನೆ ತನದವನೆಂದು ಧಾರಾಳವಾಗಿ ಹೇಳಬಹುದು. ಆಗಾಗ ಅವನ ಪತ್ನಿಯೂ ಅವನೊಂದಿಗೆ ಬರುತ್ತಾಳೆ. ರೇಷ್ಮೆಯ ಪಾಜಾಮೆ, ಅದರ ಮೇಲೆ ತಿಳಿ ನೀಲಿವರ್ಣದ ಇಳಿಬಿದ್ದ ಷರಟು. ತಲೆಯ ಮೇಲೆ ಜನಿಕಿ ಕೆಲಸ ಮಾಡಿರುವ ಹಗುರವಾದ ರೇಷ್ಮೆಯ ವಲ್ಲಿ, ಅವಕುಂಠನ. ಅವಳ ಕಾಲಿನಲ್ಲಿ ಮೆಟ್ಟಿರುವ ಮಕಮಲ್ಲಿನ ಮೇಲೆ ಚಿನ್ನದ ಜನಿಕಿ ಕೆಲಸ ಮಾಡಿರುವ ಮೆಟ್ಟುಗಳನ್ನು ನೋಡಿದರೆ ಉಮರಖಯಾಮಿನ ಸಾಕಿ ನೆನಪಿಗೆ ಬರುವಳು. ಅವಳು ಅವಕುಂಠನವತಿಯಾಗಿದ್ದರೂ ಒಂದೆರಡು ಸಲ ಅವಳ ಮುಖವನ್ನು ನೋಡುವ ಭಾಗ್ಯ ನನಗೆ ದೊರೆತಿದೆ. ಏನು ಸೌಂದರ್ಯ ನಿಧಿ! ಅಮೃತಶಿಲೆಯ ಪುತ್ತಳಿಯಂತಿದ್ದಾಳೆ. ಆದರೆ ಆ ಸೇಟಿಗೆ ಏಕಾಂತ ಸ್ಥಳಗಳಲ್ಲಿ ಆಂಗ್ಲದಂಪತಿಗಳು ಕುಳಿತು ಸರಸಸಲ್ಲಾಪವಾಡುತ್ತಿದ್ದರೆ ಪೊದೆಯ ಹಿಂದೆ ಅವಿತುನಿಂತು ಅವರನ್ನೇ ನೋಡುವ ಒಂದು ಕಯಾಲು. ಎಷ್ಟೋ ಸಲ ಆ ದಂಪತಿಗಳು ಅವನನ್ನು ಬೈದಿದ್ದಾರೆ; ಹಾಸ್ಯಮಾಡಿದ್ದಾರೆ. ಆದರೆ ಅವನಿಗೆ ನಾಚಿಕೆಯೆನ್ನುವುದೇ ಇಲ್ಲ. ಎಷ್ಟು ಐಶ್ವರ್ಯ

ವಿದ್ದರೇನು ? ರತಿಯಂತಹ ಪತ್ನಿಯಿದ್ದರೇನು ? ಅವನ ಚಾಳಿ ! ಅದರಲ್ಲಿಯೇ ಆವನಿಗೆ ಪರಮಸುಖವಿದೆಯೇನೋ.

ಒಂದು ದಿನ ಇಲ್ಲಿ ಒಂದು ಸಂಗತಿ ನಡೆಯಿತು. ಇಲ್ಲಿಗೆ ಒಬ್ಬನು ಕಡಲೆಕಾಯನ್ನು ಮಾರಲು ತಂದಿದ್ದ. ನಾನು ಕಡಲೆಕಾಯಿ ತಿಂದು ಬಹಳ ವರ್ಷಗಳಾಗಿತ್ತು. ಅವನಿಂದ ಒಂದು ಪಾವು ಕಾಯನ್ನು ಅಳಸಿ ತೆಗೆದುಕೊಂಡು ತಿನ್ನುತ್ತಾ ಕುಳಿತುಕೊಂಡೆ. ನನ್ನ ಎಳೆಯ ದಿನಗಳು ಜ್ಞಾಪಕಕ್ಕೆ ಬಂದಿತು. ಕಡಲೆಕಾಯಿಯ ಪರಷೆಯ ದಿನ ಶಾಲೆಯ ಗೆಳೆಯರನ್ನೊಡಗೂಡಿ ಬಸವನಗುಡಿಗೆ ಹೋಗಿ, ಎರಡೋ ಮೂರೋ ಸೇರು ಕಾಯನ್ನು ಕಟ್ಟಿಸಿಕೊಂಡು ಬಂಡೆಯ ಮೇಲೆ ಕುಳಿತು ಪಂದ್ಯ ಕಟ್ಟಿಕೊಂಡು ತಿನ್ನುತ್ತಿದ್ದದ್ದು. ಆ ಹೊತ್ತಿಗೆ ಸರಿಯಾಗಿ ಅಲ್ಲೊಂದು ಮಗು ನಾನು ಕುಳಿತಿದ್ದೆಡೆಗೆ ಬಂತು. ಅದಕ್ಕೆ ಐದಾರು ವರ್ಷಗಳಿರಬಹುದು. ಬಹಳ ಮುದ್ದಾಗಿತ್ತು. ಅದನ್ನು ಮಾತನಾಡಿಸಿ ಅದಕ್ಕೆ ಎರಡು ಕಾಯಿಗಳನ್ನು ಸುಲಿದುಕೊಟ್ಟೆ. ಅಷ್ಟುಹೊತ್ತಿಗೆ ಅದರ ತಾಯಿ ಎಲ್ಲಿದ್ದಳೋ 'ಸಾರಾ, ಸಾರಾ' ಎಂದು ಮಗುವಿನ ಹೆಸರನ್ನು ಹಿಡಿದು ಕರೆಯುತ್ತಾ ನಾವಿದ್ದೆಡೆಗೆ ಬಂದಳು. ಒಡನೆ ಮಗುವನ್ನು ಹತ್ತಿರಕ್ಕೆ ಎಳೆದುಕೊಂಡಳು. ಅದನ್ನು ಬಯ್ದು, ಅದರ ಕೈಯಲ್ಲಿದ್ದ ಬೀಜಗಳನ್ನು ಕಿತ್ತುಕೊಂಡಳು. ಮಗುವಿನೊಂದಿಗೆ ಹಿಂತಿರುಗಿದಳು. ಮಗುವು ನನ್ನ ಕಡೆಯೇ ನೋಡುತ್ತಿತ್ತು. ಅವಳು ಮಗುವಿನಿಂದ ಕಿತ್ತುಕೊಂಡ ಬೀಜಗಳನ್ನು ಬಾಯಿಗೆ ಹಾಕಿಕೊಂಡಿದ್ದನ್ನು ನೋಡಿದೆ. ನನಗೆ ಆಗ ಮೈ ಉರಿದುಹೋಯಿತು. ಆಗ ಒಂದು ಹಿಕಮತ್ತು ಮಾಡಿದೆ. ನನ್ನಲ್ಲಿ ಉಳಿದಿದ್ದ ಕಡಲೆಕಾಯನ್ನೆಲ್ಲಾ ಒಂದು ಕಾಗದದಲ್ಲಿ ಪಟ್ಟಣ ಕಟ್ಟಿ ಆ ಮಗುವಿಗೆ ಸನ್ನೆಮಾಡಿ ಹತ್ತಿರಕ್ಕೆ ಕರೆದು ಅದರ ಕೈಗೆ ಕೊಟ್ಟು ಆ ಜಾಗದಿಂದ ಹೊರಟುಬಿಟ್ಟೆ. ಆಕೆ ಹಿಂತಿರುಗಿ ನನ್ನನ್ನೇ ದುರುದುರನೆ ನೋಡುತ್ತಾ ನಿಂತಿದ್ದಳು. ಆಕೆಯೇ ಆ ಕಡಲೆಯಕಾಯೆಲ್ಲವನ್ನೂ ತಿಂದಳೋ, ಮಗುವಿಗೆ ಸ್ವಲ್ಪವಾದರೂ ಕೊಟ್ಟಳೋ ಅದು ನನಗೆ ತಿಳಿಯದು. ಆದರೆ ಈಚೆಗೆ ಅವಳನ್ನಾವಾಗಲಾದರೂ ಪಾರ್ಕಿನಲ್ಲಿ ಸಂಧಿಸಿದಾಗ ಅವಳ ಮುಖದ ಮೇಲೆ ಮುಗುಳು ನಗೆ ಮೂಡುತ್ತದೆ. ನನಗೂ ನಗು ಬರುತ್ತದೆ, ಅವಳ ಅಂದಿನ ಸೋಗಿಗೆ.

ಈ ಪಾರ್ಕಿನಲ್ಲಿ ನನಗೆ ಗೆಳೆಯರಾದವರು ಒಬ್ಬರೇ ಒಬ್ಬರು. ಆತನ ಹೆಸರು ಮಿ. ಮಿಡಲ್‌ಟನ್ ಎಂದು. ಆತನಿಗೆ ೭೦ ವರ್ಷಗಳು. ಜಹಜಿನಲ್ಲಿ ಇಂಜಿನಿಯರಾಗಿದ್ದು ತನ್ನ ಜೀವಮಾನವನ್ನೆಲ್ಲಾ ಸಮುದ್ರದ ಮೇಲೆ ಕಳೆದಿದ್ದಾನೆ. ಕೆಲಸದಿಂದ ನಿವೃತ್ತನಾದ ಮೇಲೆ ಕೆನಡಾದಲ್ಲಿ ಜಮೀನು ತೆಗೆದುಕೊಂಡು ಅಲ್ಲಿ ನೆಲಸಿದ್ದನಂತೆ. ಅಲ್ಲಿ ದೇಶೀಯರ ಕಾಟ ಜಾಸ್ತಿಯಾಗಲು ಭೂಮಿಕಾಣಿಯನ್ನು ಮಾರಿಕೊಂಡು ಬೆಂಗಳೂರಿಗೆ ಬಂದು ನೆಲಸಿದ್ದಾನೆ. ಅವನ ಪರಿಚಯವಾದದ್ದು ಹೀಗೆ. ನನ್ನ ಮಿತ್ರರಾದ ಇಂಜನಿಯರ್ ಸಾಹೇಬರೊಬ್ಬರು ಬೆಂಗಳೂರಿನಲ್ಲಿಯೇ ಇದ್ದರು. ಪ್ರತಿನಿತ್ಯವೂ ಸಂಜೆಯಾಗುತ್ತಲೇ ನನ್ನ ಕಚೇರಿಗೆ ಬರುತ್ತಿದ್ದರು. ಒಡನೆ ಇಬ್ಬರೂ ಕೂಡಿ ಪಾರ್ಕಿಗೆ ಬರುತ್ತಿದ್ದೆವು. ಅವರು ಒಂದು ವರ್ಷದ ನಂತರ ಬೆಂಗಳೂರನ್ನು ಬಿಟ್ಟು ಹೊರಟುಹೋದರು. ನಾನೊಬ್ಬನೇ ಆದೆ. ಮೊದಲು ಪಾರ್ಕಿಗೆ ನಾನೊಬ್ಬನೇ ಹೋಗಿ ಕುಳಿತುಕೊಳ್ಳುತ್ತಿದ್ದೆ; ನಡುವೆ ಅವರು ಬಂದರು; ಹೊರಟುಹೋದರು. ಕೊನೆಗೆ ನನಗೆ ನಾನೇ ಆದೆ. ಪಾರ್ಕಿನಲ್ಲಿ ಅದೇ ಜಾಗದಲ್ಲಿ ಏಕಾಂಗಿಯಾಗಿ ಕುಳಿತಿರುತ್ತಿದ್ದೆ. ಮಿ. ಮಿಡಲ್‌ಟನ್ ತನ್ನ ಸ್ನೇಹಿತರೊಂದಿಗೆ ಬಂದು ಮತ್ತೊಂದು ಕಲ್ಲುಬೆಂಚಿನ ಮೇಲೆ ಪ್ರತಿನಿತ್ಯವೂ ಕುಳಿತುಕೊಳ್ಳುತ್ತಿದ್ದ. ಅಂದು ಅವನ ಗೆಳೆಯರೂ ಅವನ ಕೈಬಿಟ್ಟಿದ್ದರು. ಅವನೂ ಒಬ್ಬನೇ ಇದ್ದ. ನಾನೂ ಒಬ್ಬನೇ ಕುಳಿತಿದ್ದೇನೆ. ಒಂದೆರಡು ಸಲ ಒಬ್ಬರನ್ನೊಬ್ಬರು ನೋಡಿದೆವು. ಮೊದಲು ತನ್ನ ಜಾಗ ಬಿಟ್ಟು ಇನ್ನೊಬ್ಬನು ಇದ್ದಲ್ಲಿಗೆ ಹೋಗಿ ಅವನೊಡನೆ ಮಾತನಾಡಿಸುವುದಕ್ಕೆ ಇಬ್ಬರಿಗೂ ಬಿಗುಮಾನ. ಆದರೆ ಮಾತನಾಡಿಸಬೇಕೆಂದು ಆಸೆ. ಕೊನೆಗೆ ಆತನೇ ಎದ್ದು ನಾನಿದ್ದಲ್ಲಿಗೆ ಬಂದು ಮಾತಿಗೆ ಆರಂಭಿಸಿದ.

'ನಿಮ್ಮ ಸ್ನೇಹಿತರೆಲ್ಲಿ?'

'ನಿಮ್ಮ ಸ್ನೇಹಿತರೆಲ್ಲಿ?'

ಮಾತಿಗೆ ಮೊದಲಾಯಿತು. ಸ್ನೇಹ ಬೆಳೆಯಿತು. ಅವನು ಸಮುದ್ರದ ಮೇಲಿನ ಅನೇಕ ಕತೆಗಳನ್ನು ಹೇಳಿದ್ದಾನೆ. ಅವನ ಚರಿತ್ರೆ ಅದ್ಭುತವಾಗಿದೆ. ಅವನೇ ಆರೂವರೆ ಅಡಿ ಎತ್ತರವಿದ್ದಾನೆ. ಎಪ್ಪತ್ತು ವರ್ಷ

ವಯಸ್ಸಾಗಿದ್ದರೂ ಸ್ವಲ್ಪವೂ ಬೆನ್ನು ಬಗ್ಗಿಲ್ಲ. ಅವನ ಸಾಹಸಕೃತ್ಯಗಳನ್ನು ಅವನೇ ವರ್ಣಿಸಬೇಕು! ಕೈಲಿದ್ದ ಕೋಲನ್ನು ನೆಲಕ್ಕೂರಿ ಅದರ ಮೇಲೆ ನಿಂತು, ಸಿಗಾರನ್ನು ಸೇದುತ್ತಾ ಕತೆಗೆ ಮೊದಲುಮಾಡಬೇಕು! ಕೋಲರಿಡ್ಜನ ಏನ್‌ಷಂಟ್‌ಮಾರಿನರಂತೆ ನನ್ನನ್ನು ಆಕರ್ಷಿಸಿಬಿಟ್ಟಿದ್ದಾನೆ. ಅವನು ಹೇಳಿರುವ ಕತೆಗಳ ಪೈಕಿ ಕೆಲವನ್ನಾದರೂ ನಾನು ಇಲ್ಲಿ ಹೇಳಲಿ ಎಂದು ತಾವು ಅಪೇಕ್ಷಿಸಬಹುದು. ನನಗೂ ಆಸೆಯಿದೆ. ಆದರೆ ನಾನು ಹೇಳುವುದಕ್ಕಿಂತ ಅವನಿಂದಲೇ ಹೇಳಿಸಿದರೆ ನಾನಿಲ್ಲಿ ಅವನ ಬಗ್ಗೆ ಬರೆದ ಮಾತು ಮನದಟ್ಟಾಗಬಹುದೆಂದೆಣಿಸಿ ಕೈ ತಡೆದಿದ್ದೇನೆ. ನೀವು ಬೆಂಗಳೂರಿಗೆ ಬನ್ನಿ. ನಿಮ್ಮನ್ನು ನಾನು ಕೆನ್‌ಸಿಂಗ್‌ಟನ್ ಪಾರ್ಕಿಗೆ ಕರೆತಂದು ಮಿ. ಮಿಡಲ್‌ಟನ್ನಿನ ಪರಿಚಯ ಮಾಡಿಕೊಡುತ್ತೇನೆ. ಅವನ ಚಿತ್ರಮಯ ಜೀವನವನ್ನು ಅವನ ಬಾಯಿಯಿಂದಲೇ ಕೇಳುವಿರಂತೆ. ಇನ್ನು ಈ ಪ್ರಬಂಧವನ್ನು ಮುಗಿಸಿಬಿಡುತ್ತೇನೆ.

ಈ ಪಾರ್ಕಿನ ವಿಷಯ ಇಷ್ಟು ಹೇಳಿ, ಪಾರ್ಕಿನ ಕಾವಲುಗಾರನ ವಿಚಾರ ಹೇಳದೆ ಹೋಗುತ್ತಿದ್ದೆನಲ್ಲಾ! ಅಗೋ ಅಲ್ಲಿ ಅವನು ಬರುತ್ತಿದ್ದಾನೆ. ಪಾರ್ಕಿಗೆ ನಾನು ಬೆಳಗ್ಗೆ ಬರಲಿ, ಸಂಜೆ ಬರಲಿ ಅವನು ನಾನಿದ್ದೆಡೆಗೆ ಬಂದು ಮಿಲಿಟರಿ ಸಲಾಂ ಹೊಡೆದು ಹೋಗುವುದು ವಾಡಿಕೆ—ಅಲ್ಲ ಅವನು ನನಗೆ ಕೊಡುತ್ತಿದ್ದ ಗೌರವ. ಅವನು ಸೈನ್ಯದಲ್ಲಿದ್ದು ಮಹಾಯುದ್ಧದಲ್ಲಿ ಭಾಗವಹಿಸಿ ನಿವೃತ್ತನಾಗಿರುವ ಸೇನಾಳು. ಮುದುಕ—ಆದರೂ ಕಟ್ಟಾಳು. ಅವನ ಹೆಸರು ರಣಧೀರಸಿಂಗ್! ಓ ಹತ್ತಿರಕ್ಕೇ ಬಂದ. ಹೊಡೆದ ಮಿಲಿಟರಿ ಸಲಾಂ.

'ಸಲಾಂ ಸಾಹೇಬ್'.

'ಸಲಾಂ'

## ಕೆನ್‌ಸಿಂಗ್‌ಟನ್ ಪಾರ್ಕಿನ ಒಂದು ಸಂಜೆ

ಬಿದಿಗೆಯ ಚಂದಿರನಾಗಸದಲ್ಲಿ
ಎಳನಗೆ ತುಂಬಿದೆ ಈ ಬನದಲ್ಲಿ
ಹಸುರಿನ ಹುಲ್ಲಿನ ಹೊಸ ಜಮುಖಾನ
ಹರುಷ ಸೂಸುತಿದೆ ಈ ಉದ್ಯಾನ
ತಳಿರನು ತಳೆದಿದೆ ತರುಲತೆಯೆಲ್ಲ
ತಳಿರೊಡನಾಟಕೆ ತೆಂಕಣ ಮಲ್ಲ
ಸಾಗಿದೆ ಸಂತತ ಒಲವಿನಬೇಟ
ನವದಂಪತಿಗಳ ನಲ್ಮೆಯ ಕೂಟ
ಎಳೆಯ ಮಕ್ಕಳಾ ವಿನೋದಕೇಳಿ
ಆವರಿಸಿದೆ ಬನ ಮೋದವತಾಳಿ
ಒಂದೆಡೆ ವಿದ್ಯಾವಂತರ ತಂಡ
ಚರ್ಚೆಗೆ ಸಿಲುಕಿದೆ ಈ ಬ್ರಹ್ಮಾಂಡ

*          *          *

ಅದೊ ಆ ಹೊಂಗೆಯ ಮರದಡಿಯಲ್ಲಿ
ಕವಿ ಆಚಾರ್ಯನು ಕುಳಿತಿಹನಲ್ಲಿ
ಧ್ಯಾನ ಸಮಾಧಿಯುಳೊರುವನು ಅವನು
ಕಾವ್ಯಾ ರಾಮದಿ ವಿಹರಿಸುತಿಹನು
'ಅಹಲ್ಯೆ'ಯಾಯಿತು ಶಬರಿಯ ಕತೆಯೊ
ಆವ ನಾಟಕವೊ ಕಾದಂಬರಿಯೊ
ಹೊಸ ಜಗವೊಂದನೆ ಸೃಜಿಸುತಲಿಹನು
ಆತ್ಮೋದ್ಧಾರದ ಚಿಂತೆಯೊಳಿಹನು
ಫಲಿಸಲಿ ನಿನ್ನಾ ಆಶಯ ಹೇ ಕವಿ
ನೀತಿಯ ತಿದ್ದಲು ಚಿರಋಣಿ ಈಭುವಿ

*          *          *

ಅದೊ ಆ ಆಲಿಸು ರಾಗಾಲಾಪನೆ
ಮಧುರ ಕಂಠದೊಳು ಹೊರಟಿತು ಕೀರ್ತನೆ
ಸುಸ್ವರ ಗಾನದ ಸ್ವರ ಸಮ್ಮೇಳನ
ತನ್ಮಯರಾದೆವೊ ಆಲಿಸುತರಕ್ಷಣ
ನೇರಿಳೆ ಮರದಡಿ-ಪವಡಿಸಿಯಿರುವ
ಕೂಲಿಯು ಹೈದ ಹಾಡುತಲಿರುವ
ಹಗಲಿನ ವ್ಯಸನವ ಗಾಳಿಗೆ ತೂರಿ
ಸಂಜೆಯಾಗಲೀ ಬನವನು ಸೇರಿ
ಗಾನಾಂಬುಧಿಯೊಳಗೀಸುತಲಿಹನು
ಆನಂದಾಮೃತ ಸವಿಯುತಲಿಹನು
ಸುಕೃತ ಶಾಲಿಯೈ ಇಳೆಯ ಜನರೊಳು
ಚಿರವಾಗಿರಲೈ ಹರುಷ ನಿನ್ನೊಳು

*　　　*　　　*

ಬನವನು ಬಳಸಿಹ ನಿರ್ಮಲ ಜಲವ
ಈಕ್ಷಿಸು ಬಾರ ಅದೊ ಶೃಂಗಾರ
ಜಲರೇಖೆಗಳನು ನಿರ್ಮಿಸಿ ಸುಳಿದು
ತಲೆಯನೆತ್ತಿ ಗಂಭೀರದಿ ಸರಿದು
ಮರುಕ್ಷಣ ಜಲದೊಳಗದೊ ಮರೆಯಾಗಿ
ಒಂದಿನ್ನೊಂದನು ಅರಸಲು ಕಾಡಿ
ಕ್ರೀಡೆಯನಾಡುವ ಖಗ ದಂಪತಿಗಳ
ಮೋದವ ನೋಡ ಪ್ರೇಮುದಬೀಡ
ಬನಕೆ ಬರುವ ನವ ದಂಪತಿಗಳಿಗೆ
ಆದರ್ಶವು ಆಯ್ತೀ ಖಗದೊಲವೆ

*　　　*　　　*

ಸಂಜೆಯ ರಂಜನೆ ಜಾರುತಲಿರಲು
ಶಾಂತಿಯ ಬೀರುತ ಬಂದಳು ಇರುಳು
ಬಿದಿಗೆಯ ಚಂದಿರ ಬೆಳಗಿತು ಬೆಳ್ಳಿ
ಉಡುಗಣವೆಲ್ಲವ ಚೆಲ್ಲಿದಳಲ್ಲಿ
ತಾರೆ ತಾರೆಗೂ ಕೃತ್ತಿಕೋತ್ಸವವು
ಜಲದಲಿ ಬಿಂಬಿಸೆ ದೀಪೋತ್ಸವವು
ದೇವ ಕನ್ನೆಯರ ನಡುಗೆಯ ಸಪ್ಪಳ
ಗ್ರಹಗತಿ ಗಾನಕೆ ಮೌನವೆ ಮಂಜುಳ
ವಿಶ್ವಮೋಹಿನಿಯ ವಿಜಯ ಮಹೋತ್ಸವ
ಮಂಗಳದೊಸಗೆಯ ಡಂಗುರವೀರವ
ಗಭೀರ ಸುಂದರವಾದುದು ಈ ಬನ
ಪ್ರಸನ್ನಳಾದಳು ಪ್ರಕೃತಿಯು ಈ ದಿನ

# ಪಲ್ನಿಸಾಮಿ—ಪಾರ್ಕ್!

ಪಲ್ನಿಸಾಮಿ ಬೆಂಗಳೂರಿನ ಸಿಗರೇಟು ಫ್ಯಾಕ್ಟರಿಯ ಕೆಲಸಗಾರ. ಅವನ ವಾಸ ದಂಡಿನ ಹಲಸೂರಿನಲ್ಲಿ. ಫ್ಯಾಕ್ಟರಿಯಿಂದ ಮನೆಗೆ ಹೋಗ ಬೇಕಾದರೆ ಅವನು ಕ್ವೀನ್ಸಿಂಗ್‌ಟನ್ ಪಾರ್ಕನ್ನು ಹಾದು ಹೋಗಬೇಕು. ಪ್ರತಿ ದಿನವೂ ಅವನು ಪಾರ್ಕನ್ನು ಹೊಕ್ಕು, ಅಲ್ಲೆ ಸಂಜೆಯನ್ನು ಕಳೆದು, ರಾತ್ರಿ ಮನೆಯನ್ನು ಸೇರುತ್ತಿದ್ದ. ಭಾನುವಾರವೇ ಮೊದಲಾದ ರಜಾ ದಿನಗಳಲ್ಲಿ ಹಗಲಿನಿಂದ ರಾತ್ರಿಯವರೆಗೂ ಪಾರ್ಕಿನಲ್ಲಿಯೇ ಕಾಲ ಕಳೆಯುತ್ತಿದ್ದ. ಅವನಿಗೂ ಆ ಪಾರ್ಕಿಗೂ ನಿಕಟವಾದ ಸಂಬಂಧ ಬೆಳೆದುಹೋಗಿತ್ತು.

ಪಲ್ನಿಸಾಮಿಗೆ ಇನ್ನೂ ಮದುವೆಯಾಗಿರಲಿಲ್ಲ. ಅವನ ವಯಸ್ಸು ಇಪ್ಪತ್ತೆಂಟಿರಬಹುದು. ಅವನಿಗೆ ತಾಯಿ ತಂದೆಯಾಗಲಿ ಒಡಹುಟ್ಟಿದವ ರಾಗಲಿ ಯಾರೂ ಇರಲಿಲ್ಲ. ಅವನಿಗೆ ಹತ್ತಿರ ಸಂಬಂಧಿ ಅಂದರೆ ಹೃದಯದ ಗೆಳಯ ಚಿನ್ನಕಣ್ಣ. ಚಿನ್ನಕಣ್ಣ ಅವನಂತೆಯೇ ತಬ್ಬಲಿ. ಇಬ್ಬರೂ ಒಟ್ಟಿಗೆ ಸೇರಿದ್ದು ಸಿಗರೇಟು ಫ್ಯಾಕ್ಟರಿಯಲ್ಲಿ; ಅವರಿಗೆ ಕೆಲಸ ದೊರೆತಾಗ. ಇಬ್ಬರಿಗೂ ಪರಸ್ಪರ ಪರಿಚಯವಾದದ್ದು ಕ್ವೀನ್ಸಿಂಗ್‌ಟನ್ ಫಾರ್ಕಿನಲ್ಲಿಯೇ. ಚಿನ್ನಕಣ್ಣ ಕೆಲಸ ಹುಡುಕಿಕೊಂಡು ಬೆಂಗಳೂರಿಗೆ ಬಂದು ಎರಡು ಮೂರು ದಿನಗಳಾಗಿತ್ತು. ಇನ್ನೂ ಕೆಲಸ ದೊರಕಿರಲಿಲ್ಲ. ಒಂದು ದಿನ ಬೆಳಗ್ಗೆ ಪಾರ್ಕಿನಲ್ಲಿ ಕುಳಿತು ಮುಂದೆ ಏನುಮಾಡುವುದು ಎಂದು ಯೋಚಿಸುತ್ತಿದ್ದ. ಆ ಹೊತ್ತಿಗೆ ಸರಿಯಾಗಿ ಪಲ್ನಿಸಾಮಿ ಅಲ್ಲಿಗೆ ಬಂದ. ಅದೇ ದಿನ ತಾನೆ ಕೆಲಸದ ಸಲುವಾಗಿ ಸಿಗರೇಟು ಫ್ಯಾಕ್ಟರಿಗೆ ಅವನೂ ಹೊರಟಿದ್ದ. ಚಿನ್ನಕಣ್ಣನನ್ನು ತನ್ನೊಡನೆ ಕರೆದುಕೊಂಡು ಹೋದ. ಇಬ್ಬರಿಗೂ ಕೆಲಸ ದೊರೆಯಿತು. ಇಬ್ಬರೂ ಹಲಸೂರಿನಲ್ಲಿ ಒಂದು ಕೊಠಡಿಯನ್ನು ಬಾಡಿಗೆಗೆ ತೆಗೆದುಕೊಂಡು ಒಟ್ಟಿಗೆ ಸಂಸಾರ ಹೂಡಿದರು. ಹಗಲಿನಲ್ಲಿ ಪಲ್ನಿಸಾಮಿ ಅಡಿಗೆ ಮಾಡಿಡುತ್ತಿದ್ದ. ರಾತ್ರಿ ಅಡಿಗೆಯ ಸರದಿ ಚಿನ್ನಕಣ್ಣಂದು. ಅದರಿಂದ ಪಲ್ನಿಸಾಮಿ ಸಂಜೆ ವಿರಾಮವಾಗಿ ಪಾರ್ಕಿನಲ್ಲಿ ಕಾಲ ಕಳೆಯಲು ಆಗುತ್ತಿತ್ತು. ಪಲ್ನಿಸಾಮಿಗೆ

ಇನ್ನೊಂದು ಪ್ರಾಣಿ ಅಂಟಿಕೊಂಡಿತ್ತು. ಅವಳ ಹೆಸರು ಅಲಮೇಲು. ಅವಳಿನ್ನೂ ಹುಡುಗಿ. ಪಳ್ನಿಸಾಮಿ ಅವಳನ್ನು ಸಂಧಿಸಿದಾಗ ಅವಳೊಬ್ಬ ಭಿಕಾರಿಣಿಯಾಗಿದ್ದಳು. ಒಂದು ಸಂಜೆ ಪಾರ್ಕಿನಲ್ಲಿ ಅವನು ಕುಳಿತಿದ್ದಾಗ ಅವನಿದ್ದೆಡೆಗೆ ಭಿಕ್ಷಾಟನೆಗಾಗಿ ಬಂದಳು. ಕೃಶಳಾದ ಹುಡುಗಿ. ಚಿಂದಿಯುಬಟ್ಟೆ, ಎಣ್ಣೆ ನೀರು ಕಾಣದ ಕೂದಲು, ಮೊಗದಲ್ಲಿ ದೈನ್ಯ, ಹಾಡಲು ಯತ್ನಿಸಿದರೂ ಹೊಟ್ಟೆ ಬರಿದಾಗಿದ್ದುದರಿಂದ ದನಿಯೇ ಹೊರಡದೇ ಇರುವುದು, ಇವೆಲ್ಲವನ್ನೂ ಕಂಡು ಅವನಿಗೆ ಮರುಕಹುಟ್ಟಿತು. ಎರಡು ಒಳ್ಳೆಯ ಮಾತನಾಡಿದ. ಅವಳು ತನ್ನ ಕತೆಯನ್ನು ಹೇಳಿದಳು. ತಬ್ಬಲಿ! ಅವಳನ್ನು ಕರೆದುಕೊಂಡು ಹೋಗಿ ಸಿಗರೇಟು ಫ್ಯಾಕ್ಟರಿಯಲ್ಲಿಯೇ ಕೆಲಸಮಾಡುತ್ತಿದ್ದ ಸ್ನೇಹಿತಳೊಬ್ಬಳ ಮನೆಯಲ್ಲಿ ಇರಲು ಏರ್ಪಡಿಸಿದ. ಅವಳಿಗೂ ಸಿಗರೇಟು ಫ್ಯಾಕ್ಟರಿಯಲ್ಲಿ ಕೆಲಸ ಮಾಡಿಸಿಕೊಟ್ಟ. ಅವಳು ದೊಡ್ಡವಳಾಗಿ ಸಂಸಾರದ ಭಾರ ಹೊರುವ ಶಕ್ತಿ ಪಡೆದಾಗ ಅವಳನ್ನು ಮದುವೆಮಾಡಿಕೊಳ್ಳಬೇಕೆಂಬ ಆಸೆ ಅಂಕುರಿಸಿತು. ಅವಳ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬರುವನು. ಮುಂದಿನ ಸಂಸಾರದ ಭಾವನೆ ಬಂದಾಗ ಸಂತೋಷದಿಂದ ಸಂಜೆಯನ್ನೆಲ್ಲಾ ಪಾರ್ಕಿನಲ್ಲೇ ಕಳೆದುಬಿಡುವನು. ಹುಚ್ಚನಂತೆ ಅವನು ಅಲ್ಲಿನ ಮರಗಿಡಗಳಿಗೆ ತನ್ನ ಭಾವೀ ಪ್ರಪಂಚದ ಸಂಸಾರ ಚಿತ್ರವನ್ನು ಬಣ್ಣಿಸುತ್ತಿದ್ದಿದ್ದೂ ಉಂಟು.

ಪಳ್ನಿಸಾಮಿಗೆ ಈ ಪ್ರಪಂಚದಲ್ಲಿ ಶತ್ರುಗಳಾರೂ ಇಲ್ಲ. ಎಲ್ಲರನ್ನೂ ಒಲಿಸಿಕೊಳ್ಳುವ ಮನೋವೃತ್ತಿ ಅವನದು. ಅವನ ಮಾತು, ಹೃದಯದಿಂದ ಹೊರಬೀಳುತ್ತಿದ್ದ ಅವನ ನಗು—ಒಂದು ಫರ್ಲಾಂಗು ದೂರದಲ್ಲಿ ಅವನು ಬರುತ್ತಿದ್ದರೂ ಅದೋ ಅಲ್ಲಿ ಪಳ್ನಿಸಾಮಿ ಬರುತ್ತಿದ್ದಾನೆ ಎಂದು ತಿಳಿಸುವಂತಿತ್ತು. ಪ್ರತಿ ಸಂಜೆ ಅವನ ದನಿ, ಆ ನಗು, ಕೆನ್‌ಸಿಂಗ್‌ಟನ್ ಪಾರ್ಕಿನ ಮೂಲೆ ಮೂಲೆಗಳಲ್ಲೂ ಮೊಳಗುತ್ತಿತ್ತು. ಅವನು ಸಿಳ್ಳೆ ಹೊಡೆಯುವುದರಲ್ಲಿ ಪ್ರವೀಣ. ಆ ವಿದ್ಯೆಯನ್ನು ಎಲ್ಲಿ ಕಲಿತನೋ! ಯಾವ ವಿದ್ಯಾವಂತನೂ ಕೊಳಲಿನಲ್ಲೂ ಸಹ ಅವನಹಾಗೆ ಧ್ವನಿಯನ್ನು ಹೊರಡಿಸಲಾರ. ಹಾಡಲು ಅವನು ಆರಂಭಿಸಿದರೆ ಪಾರ್ಕಿನಲ್ಲಿರು

ವವರೆಲ್ಲರೂ ತಮ್ಮ ಮಾತುಕತೆಗಳನ್ನು ಒತ್ತೊಟ್ಟಿಗಿಟ್ಟು ಆ ಸಿಳ್ಳು ವಾದ್ಯವನ್ನಾಲಿಸುತ್ತಾ ಕುಳಿತುಬಿಡುತ್ತಿದ್ದರು.

ಪಲ್ನಿಸಾಮಿಗೂ ಪಾರ್ಕಿನ ಮಾಲಿಗೂ ಗೆಳೆತನ ಹೆಚ್ಚು. ಪಲ್ನಿ ಸಾಮಿ ಪಾರ್ಕಿಗೆ ಬಂದೊಡನೆ ಆ ಮಾಲಿಯನ್ನು ಕಾಣುವವರೆಗೂ ಅವನ ಮನಸ್ಸಿಗೆ ತೃಪ್ತಿಯಿಲ್ಲ. ಮಾಲಿಯನ್ನು ಕಂಡು ಅವನಿಗೊಂದು ಸಿಗರೇಟು ಕೊಟ್ಟು, ಇಬ್ಬರೂ ಒಟ್ಟಿಗೆ ಅರ್ಧಗಂಟೆ ಕಾಲ ಕಳೆಯಬೇಕು; ಆಗ ಅವನ ಮನಸ್ಸಿಗೆ ಸಮಾಧಾನ.

ಪಲ್ನಿಸಾಮಿ ತನ್ನ ನಡತೆಯಿಂದ ಫ್ಯಾಕ್ಟರಿಯಲ್ಲಿ ಒಂದು ದೊಡ್ಡ ಸ್ತ್ರಿಕೆಯನ್ನು ಸಂಪಾದಿಸಿಕೊಂಡಿದ್ದ. ಇತರ ಕೂಲಿಗಾರರಂತೂ ಅವನ ಮಾತಿಗೆ ಬಹಳ ಗೌರವ ಕೊಡುತ್ತಿದ್ದರು. ಒಂದಲ್ಲ ಒಂದು ವಿಧದಲ್ಲಿ ಎಲ್ಲರೂ ಅವನಿಂದ ಉಪಕಾರವನ್ನು ಹೊಂದಿದ್ದರು. ಅವರ ಮನೆಗಳಲ್ಲಿ ಯಾರು ಕಾಯಿಲೆ ಬೀಳಲಿ ಅವರ ಶುಶ್ರೂಷೆಗೆ ಪಲ್ನಿಸಾಮಿ ಸಿದ್ಧನಾಗಿರುತ್ತಿದ್ದ. ಒಂದು ವರ್ಷದಲ್ಲಿ ಆರು ತಿಂಗಳು ಪಲ್ನಿಸಾಮಿಗೆ ರಾತ್ರಿಯ ವೇಳೆ ರೋಗಿಯ ಬಳಿ ಇರುವುದೂ, ಹಗಲುಹೊತ್ತು ಫ್ಯಾಕ್ಟರಿಯಲ್ಲಿ ದುಡಿಯುವುದೂ, ಆಗುತ್ತಿತ್ತು. ಹೀಗೆ ಇದ್ದರೂ ಪಲ್ನಿಸಾಮಿಗೆ ಈ ಜಗತ್ತು ಸುಂದರವಾಗಿಯೇ ಕಾಣುತ್ತಿತ್ತು.

ಎಂದಿನಂತೆ ಒಂದು ದಿನ ಸಂಜೆ ಪಲ್ನಿಸಾಮಿ ಪಾರ್ಕಿಗೆ ಬಂದ. ಆ ದಿನ ಪಾರ್ಕಿನಲ್ಲಿ ಕೋಲಾಹಲ. ಪಾರ್ಕಿನ ಬಳಿ ನಾಲ್ಕಾರು ಭಾರಿ ಮೋಟರುಗಳು ನಿಂತಿದ್ದವು. ಪಾರ್ಕಿನ ನಡುವೆ ಇರುವ ಆರಳಿಮರದಡಿಯಲ್ಲಿ ಮಿನುಗುವ ಅಂಚಿನ ಸೀರೆಗಳನ್ನುಟ್ಟು ಯೌವನದಲ್ಲಿ ಬಳಕುತ್ತಿದ್ದ ಸುಂದರಿಯರ ತಂಡವೊಂದಿತ್ತು. ಗ್ರಾಮಾಫೋನೊಂದು ಹಕ್ಕಿಗಳ ಕಲರವದೊಂದಿಗೆ ಬೆರತು ದನಿಗೊಡುತ್ತಿತ್ತು. ಮಕ್ಕಳ ಆಟಪಾಟದ ವಿನೋದಕೇಳಿ ಅಲ್ಲಿ ನಡೆದಿತ್ತು. ಪಾರ್ಕು ಒಂದು ನವೀನ ಕಳೆಯಿಂದ ಕೂಡಿತ್ತು. ಡವಾಲಿಯ ಜವಾನರು ಸುತ್ತಲೂ ಸುಳಿಯುತ್ತಿದ್ದರು. ಅಂದು ಪಲ್ನಿಸಾಮಿಗೆ ಪಾರ್ಕು ಇಂದ್ರನ ನಂದನವನದಂತೆ ಭಾಸವಾಗಿರಬೇಕು. ತನ್ನ ಪಾರ್ಕು ಈ ಆನಂದಸಾಗರದಲ್ಲಿ ತೇಲುತ್ತಿರುವುದನ್ನು ನೋಡಿ ಅವನಿಗೆ ಹೆಮ್ಮೆಯುಂಟಾಯಿತು.

ಪಲ್ನಿಸಾಮಿ ಪಾರ್ಕನ್ನು ಹೊಕ್ಕು, ಅವರಿದ್ದೆಡೆಗೆ ಬಂದು, ಮಕ್ಕಳ ಆಟಪಾಟಗಳನ್ನು ನೋಡುತ್ತಾ ನಿಂತುಕೊಂಡ. ಆ ಹೆಂಗಸರೆಲ್ಲರೂ ಒಟ್ಟಿಗೆ ಸೇರಿ ಹಾಡತೊಡಗಿದರು. ಅವರೊಡನೆ ಇದ್ದ ಗಂಡಸರು ಅವರ ಮೇಳಕ್ಕೆ ಸರಿಯಾಗಿ ಕೈಯಲ್ಲಿ ತಾಳ ಹಾಕಿದರು. ಮಕ್ಕಳು ನರ್ತನಕ್ಕೆ ಆರಂಭಿಸಿದರು. ಪಲ್ನಿಸಾಮಿಯ ಆನಂದಕ್ಕಂತೂ ಪಾರವೇ ಇಲ್ಲ. ಪಲ್ನಿ ಸಾಮಿ ಅವರ ಜೊತೆಗೆ ತಾಳ ಹಾಕುತ್ತಾ ಸಿಳ್ಳೆ ಹಾಕಿಕೊಂಡು ಹಾಡ ತೊಡಗಿದ. ಹೆಂಗಸರ ಸರಳ ದನಿಯೊಂದಿಗೆ ಅವನ ಸಿಳ್ಳೆಯ ಇಂಚರ ಬೆರತು ಅತಿ ರಮ್ಯವಾಯಿತು. ಅರ್ಧಗಂಟೆಯ ಕಾಲ ಆ ಸಂಗೀತದ ಗೋಷ್ಠಿ ಹಾಗೆಯೇ ನಡೆಯಿತು. ಆ ಹರ್ಷಸಾಗರದಲ್ಲಿ ಮಕ್ಕಳು ಕುಣಿದಾಡಿದರು. ಹಾಡು ನಿಂತಿತು. ಎಲ್ಲರೂ ಚಪ್ಪಾಳೆ ತಟ್ಟಿದರು. ಪಲ್ನಿಸಾಮಿಯೂ ಚಪ್ಪಾಳೆ ತಟ್ಟಿದ. ಇತರರು ಚಪ್ಪಾಳೆ ತಟ್ಟುವು ದನ್ನು ನಿಲ್ಲಿಸಿದರೂ ಇವನಿನ್ನೂ ಚಪ್ಪಾಳೆ ತಟ್ಟುತ್ತಲೇ ಇದ್ದ. ಆಗ ಅವರಿಗೆ ಇವನೂ ಅವರೊಂದಿಗೆ ಬೆರೆತಿರುವುದು ಗೊತ್ತಾಯಿತು. ಹೆಂಗಸ ರಾದರೊ ಸುಮ್ಮನಿದ್ದರು. ಆ ಗಂಡಸರು ಇವನ ಮೇಲೆ ಉರಿದು ಬಿದ್ದರು. ಸಾಮಾನ್ಯ ಕೂಲಿ ಆಳು ಅವರ ಸಂತೋಷಕೂಟದಲ್ಲಿ ಭಾಗಿ ಯಾಗುವುದೇ? ಅವರೊಡನೆ ಚಪ್ಪಾಳೆ ತಟ್ಟುವಷ್ಟು ಧೈರ್ಯ ಅವ ನಿಗೆ ಬಂದಿತೇ? ಅವರ ದರ್ಜೆಯೇನು; ಅವನ ದರ್ಜೆಯೇನು? ಅವರು ಕಿಡಿಕಿಡಿಯಾದರು. ಒಡನೆ ಡವಾಲಿ ಜವಾನರನ್ನು ಕರೆದು ಅವನನ್ನು ಹೊರಕ್ಕೆ ಅಟ್ಟುವಂತೆ ಆಜ್ಞಾಪಿಸಿದರು.

ಅವನು ಪಾರ್ಕಿನ ಮಾಲಿಯ ಮೊರೆ ಹೊಕ್ಕ. ಅದರಿಂದೇನೂ ಪ್ರಯೋಜನವಾಗಲಿಲ್ಲ. ಆ ಮಾಲಿಯೂ ಅವನನ್ನು ದೂರ ಸರಿದು ಕುಳಿತುಕೊಳ್ಳುವಂತೆ ಹೇಳಿದ. ಪಲ್ನಿಸಾಮಿಯ ಮುಖದಲ್ಲಿ ಆಕ್ರೋಶ ತಳಿಯಿತು. ಆದರೆ ಏನನ್ನುತಾನೆ ಮಾಡಲು ಅವನಿಂದ ಆದೀತು? ಅವನಿಗೆ ಬುದ್ಧಿ ಬಂದಮೇಲೆ ಆ ವಿಧದ ಅವಮಾನಕ್ಕೆ ಈಡಾದುದು ಆ ದಿನವೇ! ಅಧೋವದನನಾಗಿ ಮೂಲೆಯಲ್ಲಿದ್ದ ಕಲ್ಲುಬೆಂಚಿನ ಮೇಲೆ ಕುಳಿತುಬಿಟ್ಟ. ಅವರ ಆ ವಿಪರೀತ ವರ್ತನೆ ಅವನಿಗೆ ಮೊದಲು ಅರ್ಥ ವಾಗಲಿಲ್ಲ. ಅದು ಅವನ ಮನಸ್ಸನ್ನು ಕಲಕಿಬಿಟ್ಟಿತ್ತು. ನಿಶ್ಚಲವಾಗಿ

ಶಾಂತವಾಗಿದ್ದ ಅವನ ಮನಸ್ಸಿನ ಸರೋವರದಲ್ಲಿ ದೊಡ್ಡ ಬಂಡೆಯನ್ನು ಎತ್ತಿಹಾಕಿ ಅಲೆಗಳನ್ನು ಎಬ್ಬಿಸಿಬಿಟ್ಟಿತ್ತು. ಚಿಂತಾಕ್ರಾಂತನಾಗಿ ಕುಳಿತುಬಿಟ್ಟ.

ಅವನು ಅದೇ ಜಾಗದಲ್ಲಿ ಸುಮಾರು ಒಂದು ಗಂಟೆಯ ಕಾಲ ಕುಳಿತಿರಬಹುದು. ಮೋಟರುಗಳು ಹೊರಟ ಶಬ್ದ ಕೇಳಿತು. ಅವುಗಳ ದೀಪದ ಬೆಳಕು ಪರಕೆ ಚುಕ್ಕಿಯಂತೆ ಪಾರ್ಕಿನ ಒಳಗೆ ಕಾಣಿಸಿಕೊಂಡು ಅಳಿಸಿ ಹೋಯಿತು. ಕತ್ತಲು ಹೆಚ್ಚಿತು. ಪಾರ್ಕಿನ ಮಾಲಿ ಅವನು ಕುಳಿತಿದ್ದೆಡೆಗೆ ಬರುತ್ತಿದ್ದ. ಕೈಯಲ್ಲಿ ತಿಂಡಿ ತಿನಸುಗಳ ಪೊಟ್ಟಣಗಳನ್ನು ಹಿಡಿದಿದ್ದ. ಪಳ್ನಿಸಾಮಿಯೊಂದಿಗೆ ಸಲಿಗೆಯಿಂದ ಮಾತನಾಡಿ ಅವುಗಳನ್ನು ಕೊಡಲು ಬಂದ. ಅವನನ್ನು ಕಂಡಾಗ ಪಳ್ನಿಸಾಮಿಗೆ ಜಿಗುಪ್ಸೆ ಹುಟ್ಟಿತು. ಆ ಎಂಜಲನ್ನು ತಾನು ತಿನ್ನುವುದೇ? ಅವನು ಕೊಟ್ಟ ಪೊಟ್ಟಣಗಳನ್ನು ದೂರಕ್ಕೆ ಎಸೆದು ಮರುಮಾತಾಡದೆ ಅಲ್ಲಿಂದ ಹೊರಟುಬಿಟ್ಟ. ಆ ಮಾಲಿಯು ಏನೇನೋ ಸಮಾಧಾನ ಹೇಳಲು ಹೊರಟ. ಅಲ್ಲಿಗೆ ಬಂದಿದ್ದವರ ಸಿರಿತನ, ಅಧಿಕಾರ, ಇವುಗಳನ್ನು ಬಣ್ಣಿಸಿ ಅವರ ಔದಾರ್ಯವನ್ನು ಕುರಿತು ಹೇಳತೊಡಗಿದ. ಅವರು ಕೊಟ್ಟಿದ್ದ ಅಂಗರೇಕು ಮೊದಲಾದುವುಗಳನ್ನು ತೋರಿಸಿದ. ಪಳ್ನಿಸಾಮಿಗೆ ಅವರ ವಿಷಯ ಹೇಸಿಗೆಯಾಗಿ ಕಂಡಿತು. ಅವರ ಐಶ್ವರ್ಯಮದದ ಗೋಚರ ಅಂದು ಅವನಿಗೆ ಆಗಿತ್ತು. ಸಾಕು ಆ ಅನುಭವ.

ಪಾರ್ಕನ್ನು ಬಿಟ್ಟು ಬೀದಿಬೀದಿಗಳಲ್ಲಿ ಆ ರಾತ್ರಿಯೆಲ್ಲಾ ಅಲೆದ. ಮನಸ್ಸು ಅವನ ಹತೋಟಿಗೆ ಬರಲಿಲ್ಲ.

ಅವನು ಮನೆಯನ್ನು ಸೇರಿದಾಗ ಸರಿರಾತ್ರಿ. ಚಿನ್ನಕಣ್ಣು ಅಡಿಗೆ ಮಾಡಿಟ್ಟುಕೊಂಡು ಅವನಿಗಾಗಿ ಕಾದಿದ್ದ. ಮನೆಗೆ ಬಂದವನೇ ಪಳ್ನಿಸಾಮಿ ಹಾಸಿಗೆಯನ್ನು ಉರುಳಿಸಿ ಬಿದ್ದುಕೊಂಡ. ಚಿನ್ನಕಣ್ಣನಿಗೆ ಅವನ ಅಂದಿನ ನಡತೆ ಅರ್ಥವಾಗಲಿಲ್ಲ. ಮತ್ತಷ್ಟು ಗಾಬರಿಯನ್ನುಂಟು ಮಾಡಿತು. ಪಳ್ನಿಸಾಮಿ ಏನಾದರೂ ಕುಡಿದುಗಿಡಿದು ಮನೆಗೆ ಬಂದಿರುವನೇ! ಪಳ್ನಿಸಾಮಿ ಎಂದಿಗೂ ಕುಡಿಯುವವನಲ್ಲ. ಕುಡಿಯುವವರಿಗೆ ಬುದ್ಧಿ ಹೇಳುತ್ತಿದ್ದ. ಅವರ ಆ ಅಭ್ಯಾಸವನ್ನು ತಪ್ಪಿಸಲು ಪಳ್ನಿ

ಸಾಮಿಯೂ ಚಿನ್ನಕಣ್ಣನೂ ಎಷ್ಟೆಷ್ಟೋ ಪ್ರಯತ್ನಪಟ್ಟಿದ್ದರು. ಮತ್ತೆ ಪಳ್ನಿಸಾಮಿಗೆ ಏನು ಆಯಿತು ಇಂದು! ಪಳ್ನಿಸಾಮಿಯನ್ನು ಸಮಾಧಾನ ಗೊಳಿಸಿ ಊಟಕ್ಕೆ ಎಬ್ಬಿಸಲು ಎಷ್ಟೆಷ್ಟೋ ಪ್ರಯತ್ನಪಟ್ಟ; ಸಾಧ್ಯವಾಗ ಲಿಲ್ಲ. ತಾನೂ ಊಟ ಮಾಡದೆ ಹಾಗೇ ಮಲಗಿಕೊಂಡ.

ಮಾರನೆಯ ದಿನ ಹೊತ್ತಿಗೆ ಮುಂಚೆ ಎದ್ದು ಪಳ್ನಿಸಾಮಿ ಅಡಿಗೆ ಮಾಡಬೇಕಾಗಿತ್ತು. ಪಳ್ನಿಸಾಮಿ ಎದ್ದಾಗ ಆಗಲೇ ಫ್ಯಾಕ್ಟರಿಗೆ ಹೊತ್ತಾಗಿತ್ತು. ಇಬ್ಬರೂ ರಾತ್ರಿ ತಿನ್ನದೇ ಇಟ್ಟಿದ್ದ ತಂಗಳನ್ನವನ್ನೇ ತಿಂದು ಫ್ಯಾಕ್ಟರಿಗೆ ಹೊರಟರು. ನಿನ್ನೆ ಅವನಿಗೆ ಏನಾಗಿತ್ತು ಎಂಬ ವಿಷಯದಲ್ಲಿ ಪಳ್ನಿಸಾಮಿಯನ್ನು ಪ್ರಶ್ನಿಸುವ ಧೈರ್ಯ ಚಿನ್ನಕಣ್ಣನಿಗೆ ದಾರಿಯಲ್ಲಿಯೂ ಬರಲಿಲ್ಲ.

ಫ್ಯಾಕ್ಟರಿಯಲ್ಲಿ ಎಲ್ಲರೂ ಎಂದಿನಂತೆ ಖುಷಿಯಾಗಿ ಪಳ್ನಿಸಾಮಿ ಯೊಡನೆ ಮಾತನಾಡಿಕೊಂಡು ಬಂದರು. ಪಳ್ನಿಸಾಮಿ ಅವರಿಗೆ ಕೊಡು ತ್ತಿದ್ದ ಉತ್ತರದಲ್ಲಿ ಅವನ ಹಿಂದಿನ ಗೆಲವಿರಲಿಲ್ಲ. ಅದು ಎಲ್ಲರಿಗೂ ಭಾಸವಾಯಿತು. ಇಂದೇಕೆ ಪಳ್ನಿಸಾಮಿ ಹೀಗಿದ್ದಾನೆ ಎಂದು ಎಲ್ಲರಿಗೂ ಆಶ್ಚರ್ಯ. ಪಳ್ನಿಸಾಮಿಗೆ ಮೈಯಲ್ಲಿ ಸ್ವಸ್ಥವಿಲ್ಲವೇ ಎಂದು ಎಲ್ಲರೂ ಚಿನ್ನಕಣ್ಣನನ್ನು ಪ್ರಶ್ನಿಸತೊಡಗಿದರು.

ಒಂಬತ್ತು ಗಂಟೆಯಿರಬಹುದು ಫ್ಯಾಕ್ಟರಿಯ ಅಧಿಕಾರಿ ಬಂದು "ಈಗ ಕೆಲವು ದೊಡ್ಡಮನುಷ್ಯರು ಇಲ್ಲಿಗೆ ಬರುತ್ತಾರೆ. ಎಲ್ಲರೂ ತಂತಮ್ಮ ಕೆಲಸಗಳಲ್ಲಿ ಸರಿಯಾಗಿ ತೊಡಗಿರಬೇಕು" ಎಂದು ಎಚ್ಚರಿಸಿ ಹೋದ. ಯಾರು ಆ ದೊಡ್ಡ ಮನುಷ್ಯರು ಅಲ್ಲಿಗೆ ಬರುವವರು? ಸ್ವಲ್ಪ ಹೊತ್ತಿನೊಳಗೇ ಅವರೆಲ್ಲರೂ ಅಲ್ಲಿಗೆ ಬಂದರು. ಬಂದವರನ್ನು ಪಳ್ನಿಸಾಮಿ ದೃಷ್ಟಿಸಿ ನೋಡಿದ. ನಿನ್ನೆ ಪಾರ್ಕಿನಲ್ಲಿದ್ದ ಆ ದಳ! ಅವರನ್ನು ನೋಡಿ ದೊಡನೆ ಪಳ್ನಿಸಾಮಿಯ ಮೈ ಉರಿದುಹೋಯಿತು.

ಫ್ಯಾಕ್ಟರಿಯ ಅಧಿಕಾರಿ ಅವರೊಡನೆ ಎಷ್ಟು ವಿನಯದಿಂದ ವರ್ತಿ ಸುತಿದ್ದಾನೆ! ಅದನ್ನು ನೋಡಿದಾಗಲಂತೂ ಪಳ್ನಿಸಾಮಿಗೆ ಬಹಳ ದುಃಖವಾಯಿತು. ಫ್ಯಾಕ್ಟರಿಯ ಅಧಿಕಾರಿಯ ವಿಷಯದಲ್ಲಿ ಅವನಿಗೆ ತುಂಬಾ ಗೌರವವಿದ್ದಿತು. ಆತನು ಒಳ್ಳೆ ವಿದ್ಯಾವಂತ, ವಿವೇಕಶಾಲಿ.

ಅನುಭವ ಸಂಸ್ಕಾರಗಳಿಂದ ಕಳಿತ ಹಣ್ಣಿನಂತೆ ಆಗಿದ್ದ. ಉಪಕಾರಿಯೂ ಹೌದು. ಅದರಿಂದ ಅವನ ಆಜ್ಞೆಯನ್ನು ಯಾರೂ ಉಲ್ಲಂಘಿಸುತ್ತಿರಲಿಲ್ಲ. ದೇವರನ್ನು ಬಿಟ್ಟರೆ ಅವನೇ ತಮ್ಮ ಪಾಲಿಗೆ ದೇವರೆಂದು ನಂಬಿದ್ದರು. ತಾವಷ್ಟು ಗೌರವ ಕೊಡುತ್ತಿದ್ದ ಆ ವ್ಯಕ್ತಿ ಆ ದೊಡ್ಡ ಮನುಷ್ಯರ ಬಳಿ "ದಾಸೋಽಹಂ" ಎನ್ನುತ್ತಿರುವುದು ಅವರಿಗೆ ಸಹಿಸಲಾರದೆ ಹೋಯಿತು. ಪಲ್ನಿಸಾಮಿಯಂತೂ ಅವನ ವರ್ತನೆಯನ್ನು ನೋಡಲಾರದೆ ಕಣ್ಣು ಮುಚ್ಚಿಕೊಂಡ. ಯಾರು ಆ ದೊಡ್ಡ ಮನುಷ್ಯರೆಂದು ಪಕ್ಕದಲ್ಲಿದ್ದ ಗುಮಾಸ್ತೆಯೊಬ್ಬನನ್ನು ವಿಚಾರಿಸಿದ. ಫ್ಯಾಕ್ಟರಿಯ ಮಾಲೀಕರಲ್ಲ; ಸರ್ಕಾರದ ಅಧಿಕಾರಿಗಳಲ್ಲ; ಲಕ್ಷಾಧೀಶ್ವರರು ಅವರು. ಅದರಿಂದಲೇ ಆ ದರ್ಪ ಅವರಿಗೆ.

ಅಂದಿನಿಂದ ಪ್ರತಿ ಸಂಜೆಯೂ ಫ್ಯಾಕ್ಟರಿ ಮುಗಿದೊಡನೆ ಸಂಜೆಯಲ್ಲಿ ಪಾರ್ಕಿಗೆ ಬಂದು ಕುಳಿತುಕೊಳ್ಳುತ್ತಿದ್ದ. ಈಗ ಏಕಾಂಗಿಯಾಗಿ ಕುಳಿತಿರುವನು. ಸದಾ ಯೋಚನೆ. ಹಣವಂತರು; ನಿರ್ಗತಿಕರು! ಒಬ್ಬರಿಗೊಬ್ಬರಿಗೆ ಎಷ್ಟು ಅಂತರ!

ಒಂದು ದಿನ ಅವನು ಬಂದು ಕೂಡುತ್ತಿದ್ದ ಸ್ಥಳದಲ್ಲಿ ಇಬ್ಬರು ಕುಳಿತು ಮಾತನಾಡುತ್ತಿದ್ದರು. ಅವರನ್ನು ಹಿಂದೆಂದೂ ಆ ಪಾರ್ಕಿನಲ್ಲಿ ಕಂಡಿರಲಿಲ್ಲ. ಈಚೆಗೆ ಅವನಿಗೆ ಸರಿಗೆ ರುಮಾಲಿನವರನ್ನಾಗಲಿ, ಹ್ಯಾಟು ಬೂಟಿನವರನ್ನಾಗಲಿ ಕಂಡರೆ ಒಂದು ವಿಧದ ಅಸಹ್ಯ ಹುಟ್ಟುತ್ತಿತ್ತು. ಅಲ್ಲದೆ ಅವರು ತನ್ನ ಸ್ಥಳವನ್ನು ಆಕ್ರಮಿಸಿರುವುದನ್ನು ಕಂಡಾಗ ಕೋಪ ಬಂದಿತು. ಅದನ್ನು ನುಂಗಿಕೊಂಡು ಹತ್ತಿರದಲ್ಲಿದ್ದ ಹೊಂಗೆಯಮರದಡಿ ಪವಡಿಸಿದ. ಅವರ ಮಾತೂಕತೆ ಸ್ವಾರಸ್ಯವಾಗಿತ್ತು. ಅವರಲ್ಲಿ ಒಬ್ಬರು ಜರಿ ರುಮಾಲಿನವರಾದರೆ ಮತ್ತೊಬ್ಬರು ಗಾಂಧಿಟೋಪಿಯವರಿದ್ದರು. ಅವರನ್ನು ನೋಡಿದಾಗ ಸೂರ್ಯ ಚಂದ್ರರು ಏಕಕಾಲದಲ್ಲಿ ಆಗಸದಲ್ಲಿರುವಂತೆ ಕಂಡಿತು. ಅವರು ಮಾತನಾಡುತ್ತಿದ್ದುದನ್ನೇ ಕೇಳುತ್ತಾ ಕುಳಿತ.

ಗಾಂಧಿಟೋಪಿಯವರು ಜರಿ ರುಮಾಲಿನವರಿಗೆ ಅವರೂರ ಬಳಿ ನಡೆದ ಒಂದು ಸಂಗತಿಯನ್ನು ಬಿತ್ತರಿಸುತ್ತಿದ್ದರು. ಅದು ಅವನ ಮನವನ್ನು ನಾಟಿತು. ಅವನ ಮುಂದಿನ ವಿಚಾರ ಮಂಟಪಕ್ಕೆ ಅದು

ತಳಹದಿಯಾಯಿತು. ಆದುದರಿಂದ ಆ ಸಂಗತಿಯನ್ನು ಸ್ವಲ್ಪ ವಿಸ್ತಾರ ವಾಗಿ ಇಲ್ಲಿ ಬಿತ್ತರಿಸುತ್ತೇನೆ.

ಗಾಂಧಿಟೋಪಿಯವರ ಊರಿನ ಬಳಿ ಒಬ್ಬ ಐಶ್ವರ್ಯವಂತರಿದ್ದ ರಂತೆ. ಆ ಊರಿಗೆ ನೀರಿನ ಕೊರತೆ ಬಹಳವಿತ್ತು. ದಾರಿಹೋಕರಿಗಂತೂ ಕುಡಿಯಲು ನೀರಿಲ್ಲ. ದಣಿದು ಬಾಯಾರಿಹೋಗುತ್ತಿದ್ದರು. ಜನರಿಗೋ ಸ್ಕರವೆಂದು ಆ ಐಶ್ವರ್ಯವಂತರು ಭಾವಿ ತೋಡಿಸಿದರಂತೆ. ಕಿರ್ಲೋಸ್ಕರ ಪಂಪನ್ನು ಹಾಕಿಸಿದರಂತೆ. ಪಂಪನ್ನು ಒತ್ತಿದರೆ ನೀರು ಬರುವುದು. ಕುಡಿಯಬೇಕಾದವರು ಕುಡಿದು ಹೋಗುತ್ತಿದ್ದರು. ಹೆಂಗಸರು, ಮಕ್ಕಳು ಮನೆಗೆ ನೀರನ್ನು ತೆಗೆದುಕೊಂಡು ಹೋಗುವರು. ಹತ್ತಿರದಲ್ಲಿಯೇ ದನಗಳಿಗೋಸ್ಕರ ನೀರಿನ ತೊಟ್ಟಿಯೊಂದನ್ನು ಕಟ್ಟಿಸಿದ್ದರು. ಬಿಡುವಾ ದಾಗ ಹುಡುಗರು ಪಂಪನ್ನು ಒತ್ತುವರು. ತೊಟ್ಟಿಗೆ ನೀರು ಬರುವುದು. ಹುಡುಗರಿಗೆ ಅದೇ ಒಂದು ಖುಷಿ. ಯಾವಾಗಲೂ ನೀರಿನ ತೊಟ್ಟಿ ತುಂಬೇ ಇರುವುದು. ದನಕರುಗಳು ಸಮೃದ್ಧಿಯಾಗಿ ನೀರನ್ನು ಕುಡಿದು ತೃಪ್ತಿ ಹೊಂದುತ್ತಿದ್ದವು.

ಎಲ್ಲರೂ ಭಾವಿ ಕಟ್ಟಿಸಿದ ಪುಣ್ಯಾತ್ಮನನ್ನು ಹೊಗಳತೊಡಗಿದರು. ಅವರಿಗೆ ರಾವ್‌ಸಾಹೇಬ್ ಎಂಬ ಬಿರುದೂ ಬಂದಿತು. ಜನಗಳೂ ಸಭೆ ಗಳನ್ನು ಸೇರಿಸಿ ಅವರಿಗೆ ಮರ್ಯಾದೆ ಮಾಡಿದರು.

ಆದರೆ ಒಂದು ಕೆಲಸವಾಗಿತ್ತು. ಪಂಪನ್ನು ಎಷ್ಟು ಒತ್ತಿದರೂ ನೀರು ಸ್ವಲ್ಪವೇ ಬರುತ್ತಿತ್ತು. ಪಂಪು ಇನ್ನೂ ಹೊಸದು. ಆದರಿಂದ ಹೀಗೆ ಆಗುತ್ತಿರಬಹುದು ಎಂದುಕೊಂಡರು. ಕೆಲವರಿಗೆ ಈ ಪಂಪನ್ನು ಒತ್ತಿ ನೀರನ್ನು ತೆಗೆದುಕೊಂಡುಹೋಗುವುದಕ್ಕಿಂತ ನೀರನ್ನು ಸೇದಿಕೊಂಡು ಹೋಗುವುದೇ ಲೇಸೆಂದು ಅನ್ನಿಸುತ್ತಿತ್ತು. ಆದರೂ ಕೆಲವು ದಿವಸಗಳಾದ ಮೇಲೆ ಸರಿಹೋಗುವುದೇನೋ ಎಂದು ಪಂಪಿನಿಂದಲೇ ನೀರನ್ನು ತೆಗೆದು ಕೊಂಡು ಹೋಗುತ್ತಿದ್ದರು. ಅದೇ ರೂಢಿಯಾಯಿತು. ಎಲ್ಲರೂ ಪಂಪಿಗೇ ಕಾಯಬೇಕು. ಪಂಪಿನಿಂದಲೇ ನೀರನ್ನು ತೆಗೆದುಕೊಂಡುಹೋಗಬೇಕು. ಭಾವಿಯಿಂದ ನೀರನ್ನು ಸೇದುವ ಅಭ್ಯಾಸ ತಪ್ಪೇ ಹೋಯಿತು. ಪ್ರತಿ ಮನೆಯಲ್ಲಿಯೂ ಇದ್ದ ಸೇದುವ ಹಗ್ಗ ಗೆದ್ದಲ ಪಾಲಾಯಿತು.

ಪಂಪೂ ಹಳೆಯದಾಯಿತು. ಆದರೂ ಅದರಲ್ಲಿ ನೀರು ಬರುತ್ತಿದ್ದುದು ಅಷ್ಟೇ! ಅದರಲ್ಲಿಯೇ ತೃಪ್ತಿ ಹೊಂದುತ್ತಿದ್ದರು ಆ ಜನರು.

ಕೆಲವು ದಿನಗಳಾದವು. ಅವರಲ್ಲಿ ಒಬ್ಬ ಬುದ್ಧಿವಂತ ಹುಟ್ಟಿಕೊಂಡ. ಪಂಪಿನ ಬಳಿ ಕುಳಿತು ಯೋಚಿಸತೊಡಗಿದ. "ನಾನು ಈ ಪಂಪನ್ನು ಒತ್ತಲು ಎಷ್ಟು ಶಕ್ತಿ ಉಪಯೋಗಿಸುತ್ತೇನೆ. ಆದರೆ ಅದರಲ್ಲಿ ಬರುವ ನೀರು ಇಷ್ಟು ಸ್ವಲ್ಪ. ಪಂಪಿನಲ್ಲೇನೋ ತಪ್ಪಿರಬೇಕು ಎಂದು ಪಂಪನ್ನು ಪರೀಕ್ಷಿಸತೊಡಗಿದ. ಏನೂ ತಪ್ಪು ಸಿಕ್ಕಲಿಲ್ಲ. ಆದರೆ ಅವನು ಅಷ್ಟಕ್ಕೆ ಬಿಡಲಿಲ್ಲ. ಪಂಪಿನ ಮೂಲದಿಂದ ಪರೀಕ್ಷಿಸಿಕೊಂಡುಬಂದ. ಆಗ ಗುಟ್ಟು ರಟ್ಟಾಯಿತು. ಪಂಪನ್ನು ಒತ್ತಿದಾಗ ಭಾವಿಯಿಂದ ಬರುವ ನೀರು ಎರಡು ನಾಳಗಳಲ್ಲಿ ಬರುತ್ತಿತ್ತು. ಒಂದು ನಾಳದಲ್ಲಿ ಬಂದ ನೀರು ಪಂಪನ್ನು ಒತ್ತಿದವರಿಗೆ ಸಿಕ್ಕಿದರೆ ಇನ್ನೊಂದು ನಾಳದಲ್ಲಿ ಹರಿದುಬಂದ ನೀರು ರಾವ್‌ಸಾಹೇಬನ ಮನೆಯಲ್ಲಿ ಕಟ್ಟಿಸಿದ್ದ ತೊಟ್ಟಿಗೆ ಹೋಗಿ ಬೀಳುತ್ತಿತ್ತು. ಕೆಲಸ ಮಾಡಿದವನಿಗಿಂತ ನಾಲ್ಕರಷ್ಟು ಫಲವನ್ನು ರಾವ್‌ಸಾಹೇಬ ಒಬ್ಬರೂ ತಿಳಿಯದಂತೆ ಹೊಂದುತ್ತಿದ್ದ. ರಾವ್‌ಸಾಹೇಬನ ವಿಸ್ತಾರವಾದ ತೋಟಕ್ಕೆ ಸುಲಭವಾಗಿ ನೀರಿನ ಸರಬರಾಯಿ ನಡೆಯುತ್ತಿತ್ತು.

ಆ ಬುದ್ಧಿವಂತ ಊರಿನವರಿಗೆ ಇದ್ದ ವಿಷಯ ಹೇಳಿದ. ಅನೇಕರು ಪಂಪಿನಿಂದ ನೀರನ್ನು ತೆಗೆದುಕೊಂಡುಹೋಗುವ ಅಭ್ಯಾಸಕ್ಕೆ ಸಿಕ್ಕಿಬಿದ್ದಿದ್ದಾರೆ. ಬುದ್ಧಿವಂತನಮಾತಿಗೆ ಗಮನಕೊಡಲಿಲ್ಲ. ಕೆಲವರು ರಾವ್‌ಸಾಹೇಬ ಅಷ್ಟು ಖರ್ಚುಮಾಡಿ ಭಾವಿ ತೋಡಿಸಿ ಪಂಪನ್ನು ಹಾಕಿಸಿದ್ದಾನೆ, ಅಷ್ಟಾದರೂ ಪ್ರತಿಫಲ ಬೇಡವೇ ಎಂದುಬಿಟ್ಟರು. ಇನ್ನು ಕೆಲವರಂತೂ ಆ ಬುದ್ಧಿವಂತನನ್ನು ತಿಂದ ಮನೆಗೆ ಎರಡು ಬಗೆದನೆಂದು ಅಲ್ಲಗಳೆದರು. ಈ ಸುದ್ದಿ ರಾವ್‌ಸಾಹೇಬನ ಕಿವಿಗೆ ಮುಟ್ಟದೇ ಇರಲಿಲ್ಲ. ಅವನು ಊರಿನಲ್ಲಿ ಇಂತಹವರಿದ್ದರೆ ಊರು ಪುಂಡುಗೊಂಪೆಯಾಗುವುದೆಂದು ಮೆಲ್ಲಗೆ ಅವನನ್ನು ಊರಿನಿಂದ ಹೊರಕ್ಕೆ ಹೊರಡಿಸಿಬಿಟ್ಟ.

ಬುದ್ಧಿವಂತ ಹಾಕಿದ ಬೀಜ ನಿಷ್ಫಲವಾಗಲಿಲ್ಲ. ಕ್ರಮೇಣ ಊರಿನ ಜನ ಎಚ್ಚತ್ತರು.

ಪಳ್ನಿಸಾಮಿ ಈ ಕತೆಯನ್ನು ಕೇಳಿ ಎಚ್ಚತ್ತ. ಹಣವಂತರ ಮತ್ತು ಫ್ಯಾಕ್ಟರಿ ಮಾಲೀಕರುಗಳ ಬಣ್ಣ ಅವನಿಗೆ ಈಗ ಕಾಣತೊಡಗಿತು. ಅವನಲ್ಲಿ ಇನಿತು ವಿಚಾರಲಹರಿ ಹೊರಟಿತು. 'ಒಂದಾನೊಂದು ಕಾಲದಲ್ಲಿ ಹಣವಂತರನ್ನು ಪೂಜಿಸುತ್ತಿದ್ದೆವು. ಒಂದು ಹಳ್ಳಿಯಲ್ಲಿ ಐಶ್ವರ್ಯವಂತರ ಕುಳವೊಂದಿದೆಯೆಂದರೆ ಆ ಹಳ್ಳಿಗೇ ಗೌರವವಿತ್ತು. ಆಗ ಐಶ್ವರ್ಯವಂತರೂ ಬಡವರನ್ನು ಮಕ್ಕಳಂತೆ ಪೋಷಿಸುತ್ತಿದ್ದರು. ಕಾಲ ಬದಲಾಯಿಸಿತು. ಐಶ್ವರ್ಯವಂತರು ಯಾವ ಪುಣ್ಯದ ಕೆಲಸದಲ್ಲೂ ತೊಡಗಿದರೆಂದರೆ ಹಿಂದೆಯೇ ಅದರಿಂದ ತಮಗೆ ಎಷ್ಟು ಆದಾಯವಿದೆ ಎಂದು ಲೆಕ್ಕ ಹಾಕುವ ಸ್ಥಿತಿಗೆ ಇಳಿದರು. ಹಿಂದೆ ಬಡವರಿಗೂ ಐಶ್ವರ್ಯವಂತರಿಗೂ ನಿತ್ಯಜೀವನದಲ್ಲಿ ಹೆಚ್ಚಾಗಿ ಭೇದಭಾವವಿರುತ್ತಿರಲಿಲ್ಲ. ಈಚೆಗೆ ಬಡವರು ಅಸ್ಪೃಶ್ಯರಾದರು. ಹಣವಂತರು ಸೇರಿ ದೊಡ್ಡ ದೊಡ್ಡ ಫ್ಯಾಕ್ಟರಿಗಳನ್ನು ತೆರೆದಾಗ ನಮಗೆ ಜೀವನವನ್ನು ಕಲ್ಪಿಸಿಕೊಡುವುದಕ್ಕಾಗಿ ಎಷ್ಟು ಶ್ರಮ ತೆಗೆದುಕೊಳ್ಳುತ್ತಿದ್ದಾರೆ, ನಮ್ಮ ಸಲುವಾಗಿ ತಮ್ಮ ಹಣವನ್ನೆಲ್ಲಾ ಫ್ಯಾಕ್ಟರಿಗಳ ಮೇಲೆ ಹಾಕುತ್ತಿದ್ದಾರೆ, ಅದರಿಂದ ಅವರಿಗೆ ಮೂರುಕಾಸಾದರೂ ವಾಪಸು ಬರುವುದೋ ಇಲ್ಲವೋ ಅದರ ಕಡೆಗೆ ಲಕ್ಷ್ಯಗೊಡದೆ ಎಷ್ಟು ಪುಣ್ಯ ಕಟ್ಟಿಕೊಳ್ಳುತ್ತಿದ್ದಾರೆ, ಅವರ ವಂಶ ಬೆಳೆಯಲಿ ಹೊಟ್ಟೆ ತಣ್ಣಗಿರಲಿ ಎಂದು ಹರಸುತ್ತಿದ್ದೆವು. ಈಗ ಈ ಕತೆ ಅವರ ನಿಜವಾದ ಬಣ್ಣವನ್ನು ತೋರಿಸುತ್ತಿದೆ. ಫ್ಯಾಕ್ಟರಿಗಳನ್ನು ಕಲ್ಪಿಸಿ ಅದರಿಂದ ಯಾವ ಲಾಭವನ್ನು ಪಡೆಯುತ್ತಿದ್ದಾರೆ ಬಡವರನ್ನೂ ಕೂಲಿಕಾರರನ್ನೂ ಹೇಗೆ ದುಡಿಸಿ ತಮ್ಮ ಬೊಕ್ಕಸ ತುಂಬಿಕೊಳ್ಳುತ್ತಿದ್ದಾರೆ ಎಂಬುದನ್ನು ಸ್ಪಷ್ಟಪಡಿಸುತ್ತಿದೆ' ಎಂದುಕೊಂಡ.

ಪಳ್ನಿಸಾಮಿಯೂ ಆ ಬುದ್ಧಿವಂತನಂತೆ ಆದ. ತನಗೆ ತೋಚಿದುದನ್ನು ಕುರಿತು ಮತ್ತೊಬ್ಬರೊಡನೆ ವಿಚಾರಮಾಡೋಣವೆಂದರೆ ಅವನ ಜೊತೆಯವರಾರೂ ಅವನ ಮಟ್ಟಕ್ಕೆ ಏರಿರಲಿಲ್ಲ. ಕೆಲವು ದಿನ ಈ ವಿಷಯವನ್ನು ಕುರಿತು ಚಿನ್ನಕಣ್ಣನ್ನೊಂದಿಗೆ ಪ್ರಸ್ತಾಪ ಮಾಡಿದ. ಚಿನ್ನಕಣ್ಣನಿಗೆ ಅವನು ಹೇಳಿದ್ದೊಂದೂ ಅರ್ಥವೇ ಆಗಲಿಲ್ಲ. ಆದ್ದರಿಂದ ಪಳ್ನಿಸಾಮಿ ಏಕಾಂಗಿಯಾದ. ಏಕಾಂಗಿಯಾಗಿಯೇ ಪಾರ್ಕಿನಲ್ಲಿದ್ದ ಕಲ್ಲುಬೆಂಚಿನಮೇಲೆ ಸಂಜೆ, ರಾತ್ರಿ ಕುಳಿತು ಯೋಚಿಸುತ್ತಿರುವನು.

ತಾನು ಯೋಚಿಸಿ ನಿರ್ಧಾರಕ್ಕೆ ಬಂದಾಗ ಆ ವಿಷಯವನ್ನು ಇತರ ಕೂಲಿಕಾರರಿಗೆ ವ್ಯಕ್ತಪಡಿಸಲು ಯತ್ನಿಸುವನು. ಸಂಜೆ ಅವನೊಡನೆ ಎಲ್ಲರೂ ಪಾರ್ಕಿನಲ್ಲಿ ಕಲೆಯುವರು. ಪಲ್ನಿಸಾಮಿ ಪ್ರತಿ ನಿತ್ಯವೂ ತನಗೆ ಹೊಳೆದ ವಿಷಯಗಳನ್ನು ಹೇಳುವನು; ಅವರು ಕೇಳುವರು; ಎಲ್ಲರೂ ಅವನನ್ನು ಮರ್ಯಾದೆಯಿಂದ ಕಾಣುವರು. ಕೆಲವು ತಿಂಗಳುಗಳಲ್ಲಿಯೇ ಎಲ್ಲರಿಗೂ ಅವನು ಗುರುವಿನಂತೆ ಆದ. ಅವನ ಮಾತು ಅವರಿಗೆ ವೇದ ವಾಕ್ಯವಾಯಿತು.

ಇಷ್ಟರಲ್ಲಿ ಅಲಮೇಲೂನ ನೋಡಿಕೊಳ್ಳುತ್ತಿದ್ದಾಕೆ ತೀರಿಕೊಂಡಳು. ಪಲ್ನಿಸಾಮಿ ಅಲಮೇಲೂನ ಕರೆದುಕೊಂಡು ಬಂದು ಮನೆಯಲ್ಲಿಯೇ ಇಟ್ಟುಕೊಳ್ಳಬೇಕಾಯಿತು. ಅಲಮೇಲು ಪ್ರಾಪ್ತ ವಯಸ್ಕಳಾಗಿದ್ದಳು. ಪಲ್ನಿಸಾಮಿಗೆ ಮೊದಲಿನ ಹುರುಪೇ ಇದ್ದಿದ್ದರೆ ಈ ಹೊತ್ತಿಗೆ ಆಗಲೇ ಮದುವೆಯಾಗಿಬಿಟ್ಟಿರುತ್ತಿದ್ದ. ಆದರೆ ಈಗ ಒಡನೆ ಮದುವೆಯಾಗಲು ಮನಸ್ಸು ಒಡಂಬಡಲಿಲ್ಲ. ಕೆಲವು ದಿನಗಳನ್ನು ಹಾಗೆಯೇ ತಳ್ಳಬೇಕೆಂದು ಮಾಡಿಕೊಂಡ. ಅಲಮೇಲು ಅವನ ಮನೆಗೆ ಬಂದಮೇಲೆ ಫ್ಯಾಕ್ಟರಿಗೆ ಹೋಗುವುದನ್ನು ಬಿಟ್ಟು ಬಿಟ್ಟಳು. ಮನೆಯ ಕೆಲಸಗಳಲ್ಲಿ ತೊಡಗಿದಳು. ಪಲ್ನಿಸಾಮಿ ಹತಾಶನಾಗಿ ಮನೆಗೆ ಬಂದಾಗ ಅವನನ್ನು ಸಂತೋಷ ಗೊಳಿಸಲು ಯತ್ನಿಸುವಳು. ಅವನ ರುಚಿಯನ್ನು ಅರಿತು ಅದಕ್ಕೆ ತಕ್ಕ ತಿಂಡಿಗಳನ್ನು ಮಾಡಿಡುವಳು. ಕೆಲವು ಸಂಜೆಗಳಲ್ಲಿ ಪಲ್ನಿಸಾಮಿಯೊಂದಿಗೆ ಪಾರ್ಕಿಗೆ ಹೋಗಿಬರುವಳು. ಆದರೂ ಪಲ್ನಿಸಾಮಿಯ ಮನಸ್ಸು ಶೃಂಗಾರದ ಕಡೆಗೆ ಹೊರಳಲಿಲ್ಲ. ದಿನದಿನಕ್ಕೂ ಕೂಲಿಕಾರರ ದುಸ್ಥಿತಿ ದ್ವಿಗುಣವಾಗಿ ಕಾಣಿಸಿಕೊಳ್ಳತೊಡಗಿತು. ಅವರ ಕಷ್ಟಸುಖಗಳನ್ನು ಅಲು ಮೇಲೂಗೆ ಬಿತ್ತರಿಸುವನು. ಕಾಯಿಲೆ ಬಿದ್ದಿರುವ ಹೆಂಗಸರ ಶುಶ್ರೂಷೆಗೆ ಅವಳನ್ನು ಕಳುಹಿಸಿಕೊಡುವನು. ತಾನು ಹುಡುಗನಾಗಿದ್ದಾಗ ಕಲಿತಿದ್ದ ಕನ್ನಡ ಅರವಗಳನ್ನು ಅವಳಿಗೆ ಹೇಳಿಕೊಡಲು ಆರಂಭಿಸಿದ. ಅವಳಿಗೆ ನರ್ಸಾಗುವಂತೆ ಬೋಧಿಸತೊಡಗಿದ. ಜೀವನವನ್ನು ಸೇವಾಕಾರ್ಯ ದಲ್ಲಿ ವಿನಿಯೋಗಿಸಬೇಕೆಂದು ಅವಳಿಗೆ ಸದಾಕಾಲ ಹೇಳತೊಡಗಿದ. ನರ್ಸು ಕೆಲಸದಲ್ಲಿ ತರಪೇತಾಗಲು ಅವಳನ್ನು ಆಸ್ಪತ್ರೆಗೆ ಕಳುಹಿಸಿಕೊಟ್ಟ.

ಈ ಹೊತ್ತಿಗೆ ಪಲ್ನಿಸಾಮಿಗೆ ಇನ್ನೊಬ್ಬ ಸ್ನೇಹಿತ ಸಿಕ್ಕಿದ. ಅವನು ಕಣಿವೆಕೆಳಗಿನವ. ವಿದ್ಯಾವಂತ; ಬಿ. ಎ. ತರಗತಿಯವರೆಗೂ ಓದಿದ್ದ. ಎಲ್ಲೂ ಕೆಲಸ ಸಿಕ್ಕದೆ ಅಲೆದಲೆದು ಕೊನೆಗೆ ಈ ಫ್ಯಾಕ್ಟರಿಗೆ ಬಂದು ಸೇರಿಕೊಂಡಿದ್ದ. ಇಬ್ಬರೂ ಸೇರಿ ಸಂಜೆ ಈ ಪಾರ್ಕಿನಲ್ಲಿ ಇತರ ಕೂಲಿಯವರಿಗೆ ಪಾಠ ಪ್ರವಚನಮಾಡಿಸಲು ಆರಂಭಿಸಿದರು. ಪ್ರತಿ ದಿನವೂ ಕೂಲಿಯವರಿಗೆ ವೃತ್ತಪತ್ರಿಕೆಗಳನ್ನು ಓದಿ ಹೇಳುತ್ತಿದ್ದರು. ಪ್ರಪಂಚದಲ್ಲಿ ಯಾವ ಜಾಗೃತಿ ಹುಟ್ಟಿದೆ ಎಂಬುದನ್ನು ತಿಳಿಯಹೇಳು ವರು. ದಿನದಿನಕ್ಕೆ ಇವರ ಗುಂಪು ದೊಡ್ಡದಾಗುತ್ತ ಬಂತು. ಇವರದೇ ಒಂದು ಸಂಘ ಏರ್ಪಟ್ಟಿತು. ಒಂದು ದಿನ ಫ್ಯಾಕ್ಟರಿಯ ಅಧಿಕಾರಿ ಇವರ ಸಂಘಕ್ಕೆ ಬಂದುಹೋದ. ಅವನ ಭೇಟಿಯಿಂದ ಸಂಘಕ್ಕೆ ಏನು ಕೆಡುಕು ಸಂಭವಿಸುವುದೋ ಎಂದು ಹೆದರಿಕೊಂಡರು. ಕೆಡುಕಿನ ಬದಲು ಆ ಅಧಿಕಾರಿ ಅವರಿಗೆ ಉಪಕಾರ ಮಾಡಿದ. ಅವರಿಗೆ ರಾತ್ರಿ ಶಾಲೆಯನ್ನು ತೆರೆಯಲು ಸಹಾಯವನ್ನು ಫ್ಯಾಕ್ಟರಿಯಲ್ಲಿ ಕೊಡಿಸಿಕೊಟ್ಟ. ರಜ ದಿನಗಳಲ್ಲಿ ಭಜನಾ ಕೂಟಗಳನ್ನು ಏರ್ಪಡಿಸಲು ಜಾಗ ಒದಗಿಸಿಕೊಟ್ಟ. ಪಲ್ನಿಸಾಮಿಗೆ ಆಗ ತೋರಿತು ಅಧಿಕಾರಿಗಳೆಲ್ಲಾ ತೆಗೆದುಹಾಕುವ ಜನರಲ್ಲ, ಅವರಲ್ಲಿಯೂ ಒಳ್ಳೆಯವರಿದ್ದಾರೆ ಎಂದು. ಅಧಿಕಾರಿಯ ವಿಷಯದಲ್ಲಿ ಅವನ ಸ್ನೇಹಿತ ಪಲ್ನಿಸಾಮಿಯನ್ನು ಎಚ್ಚರಿಸುತ್ತಿದ್ದ. ಅಧಿಕಾರಿ ಇಷ್ಟು ಸಹಾಯಮಾಡುವುದರ ಆಂತರ್ಯ ಏನೋ ಇದೆ ಎಂದು ಹೇಳುತ್ತಿದ್ದ. ಇತರ ಕೂಲಿಯವರಿಗೆ ಆ ಅಧಿಕಾರಿ ಪಲ್ನಿಸಾಮಿ ಯನ್ನೇ ತನ್ನ ಬಲೆಗೆ ಹಾಕಿಕೊಳ್ಳುತ್ತಿದ್ದಾನೆ ಎಂದು ಸಮಯ ಸಿಕ್ಕಿದಾಗ ಬೋಧಿಸತೊಡಗಿದ್ದ. ಎಷ್ಟು ದಿನಗಳು ಕಳೆದರೂ ಅಧಿಕಾರಿಯಿಂದ ಅವರ ಸಂಘಕ್ಕೆ ಯಾವ ಅಪಾಯವೂ ಸಂಭವಿಸಲಿಲ್ಲ. ಅಧಿಕಾರಿಯೂ ಪಲ್ನಿಸಾಮಿಯೂ ಸೇರಿ ಫ್ಯಾಕ್ಟರಿಯ ಮಾಲೀಕರುಗಳಿಂದ ಕೂಲಿ ಯವರಿಗೆ ಅನೇಕ ಸೌಕರ್ಯಗಳನ್ನು ಮಾಡಿಸಿಕೊಟ್ಟರು. ಬರುಬರುತ್ತಾ ಅವರ ಸಂಘಕ್ಕೆ ಆ ಅಧಿಕಾರಿಯೂ ಪಲ್ನಿಸಾಮಿಯೂ ಮನಸ್ಸು ಹೃದಯ ದಂತಾದರು. ಪಲ್ನಿಸಾಮಿಯ ಸ್ನೇಹಿತ ಆ ಅಯ್ಯರು ದೂರವಾಗ ತೊಡಗಿದ.

ಕೆಲವು ದಿನಗಳಲ್ಲಿಯೇ ಫ್ಯಾಕ್ಟರಿಯಲ್ಲಿ ಒಂದು ವಿಶೇಷ ಘಟನೆ ನಡೆದುಹೋಯಿತು. ಭಾರತದ ವೀರ ಪುಂಗವರೊಬ್ಬರ ಮರಣದ ನಂತರ ದೇಶದಲ್ಲಿ ದೊಡ್ಡ ಆಂದೋಳನವೆದ್ದಿತ್ತು. ಭಾರತದ ಎಲ್ಲಾ ಕಡೆಗಳಲ್ಲಿಯೂ ಹರತಾಳ ನಡೆದಿತ್ತು. ಈ ಫ್ಯಾಕ್ಟರಿಯಲ್ಲಿಯೂ ಅಂದು ಮುಷ್ಕರ. ಆ ಮುಷ್ಕರ ಎಲ್ಲಾ ಕಡೆಗಳಲ್ಲಿ ಒಂದೆರಡು ದಿನಗಳಲ್ಲಿಯೇ ಕೊನೆಗಂಡಂತೆ ಇಲ್ಲಿ ಆಗಲಿಲ್ಲ. ಇದರ ಜಾಡೇ ಬೇರೆಯಾಗಿ ಹೋಯಿತು. ಕೂಲಿಯವರು ಸಂಬಳ ಹೆಚ್ಚಿಸಬೇಕೆಂದು ಹಟ ಹಿಡಿದರು. ಕೆಲಸ ಮಾಡುವ ಕಾಲ ಕಡಿಮೆ ಮಾಡಬೇಕೆಂದೂ ರಜದಿನಗಳನ್ನು ಹೆಚ್ಚಿಸಬೇಕೆಂದೂ ಮುಷ್ಕರ ಹಿಡಿದರು. ಅವರ ಮುಷ್ಕರಕ್ಕೂ ಪಲ್ನಿಸಾಮಿಗೂ ಯಾವ ವಿಧವಾದ ಸಂಬಂಧವೂ ಇರಲಿಲ್ಲ. ಅವನಿಗೆ ಗಲಭೆ ಹಟ ಇವೊಂದೂ ಸೇರುತ್ತಿರಲಿಲ್ಲ. ಯಾವ ಕೆಲಸವನ್ನು ಮಾಡಿದರೂ ಅವನು ಅದನ್ನು ಸರಿಯಾದ ರೀತಿಯಲ್ಲಿಯೇ ಮಾಡತಕ್ಕವನು. ಅಪಕ್ವ ಅನ್ನ ತಿನ್ನಿಸಿ ಅಜೀರ್ಣ ಮಾಡಿಸುವ ಸ್ವಭಾವದವನಲ್ಲ. ಫ್ಯಾಕ್ಟರಿಯ ಅಧಿಕಾರಿಯನ್ನು ಕಂಡು ಮಾಲೀಕರೊಡನೆ ಒಂದು ತೀರ್ಮಾನಕ್ಕೆ ಬರುವಂತೆ ಮಾಡಿಸಲು ವಿಶ್ವಪ್ರಯತ್ನ ಪಟ್ಟ. ಫ್ಯಾಕ್ಟರಿಯ ಮುಷ್ಕರ ಅವನ ಕೈ ಮೀರಿಹೋಯಿತು.

ಆ ಮುಷ್ಕರಕ್ಕೆ ಆ ಅಯ್ಯರೇ ಕಾರಣಕರ್ತರೆಂದೂ ಹರತಾಳದಲ್ಲಿ ಮೊದಲಾಗಿದ್ದಿದ್ದು ಹಾಗೆಯೆ ಕೊನೆಗಾಣಬಹುದಾಗಿದ್ದಿತೆಂದೂ, ಆ ಅಯ್ಯರು ಫ್ಯಾಕ್ಟರಿಯ ಪ್ರತಿಸ್ಪರ್ಧಿಯಾದ ಇನ್ನೊಂದು ಫ್ಯಾಕ್ಟರಿಯವರಿಂದ ಲಂಚ ತಿಂದು ಈ ಗಲಭೆ ಎಬ್ಬಿಸಿದ್ದಾನೆಂದೂ ವರ್ತಮಾನ ಬಂತು. ಪಲ್ನಿಸಾಮಿ ಅದನ್ನು ನಂಬಲಿಲ್ಲ. ಕುಯುಕ್ತಿ ಕುಚೋದ್ಯಗಳು ಪಲ್ನಿಸಾಮಿಗೆ ಅರ್ಥವಾಗುತ್ತಿರಲಿಲ್ಲ. ಆ ಅಯ್ಯರನ್ನು ಸರ್ಕಾರದವರು ಹಿಡಿದು ಹಾಕಿದರು.

ಮುಷ್ಕರದ ಮೂರನೆಯ ದಿನ ಕೆಲಸಗಾರರ ಸಭೆ ಸೇರಿತ್ತು. ಅದರಲ್ಲಿ ಪಲ್ನಿಸಾಮಿ, ಫ್ಯಾಕ್ಟರಿಯ ಅಧಿಕಾರಿ ಆ ಅಯ್ಯರು ಎಲ್ಲರೂ ಮಾತನಾಡಿದ್ದರು. ಪೋಲಿಸಿನವರು ಅವರ ಗುಂಪನ್ನು ಚದುರಿಸಲು ಬರುವ ಹೊತ್ತಿಗೆ ಆ ಅಯ್ಯರು ಪರಾರಿಯಾಗಿದ್ದ. ಆ ದಿನ ಅನೇಕರಿಗೆ

ಲಾಠಿಏಟುಗಳೂ ಗುಂಡಿನ ಏಟುಗಳೂ ಬಿದ್ದಿದ್ದವು. ಅಂದಿನಿಂದ ಜನರು ದಿನಗಳಗಟ್ಲೆ ಮುಷ್ಕರಹಿಡಿದಿದ್ದರಿಂದ ಅಹನ್ಯಹನಿ ಕಾಲಕ್ಷೇಪ ಮಾಡುತ್ತಿದ್ದ ಕೆಲವು ಮನೆಗಳಲ್ಲಿ ಹೆಂಗಸರು ಮಕ್ಕಳಿಗೆ ಊಟಕ್ಕಿಲ್ಲದೆ ನರಳುವ ಸಂಭವ ಬಂದಿತು. ಆಗ ಅಧಿಕಾರಿಯ ಸಹಾಯ ಪಡೆದು ಪಳ್ನಿಸಾಮಿ ಅಹೋರಾತ್ರಿ ಸೇವಾಕಾರ್ಯದಲ್ಲಿ ನಿಂತ. ಪಳ್ನಿಸಾಮಿ, ಅಲಮೇಲು, ಚಿನ್ನಕಣ್ಣು ಇವರು ಏಟು ತಿಂದಿದ್ದವರ ಮನೆಗೆ ಹೋಗಿ ಶುಶ್ರೂಷೆ ಮಾಡತೊಡಗಿದರು. ಧರ್ಮಿಷ್ಠರಲ್ಲಿ ಹೋಗಿ ಆಹಾರಪದಾರ್ಥಗಳನ್ನು ತಿರಿದುತಂದು ಹೊಟ್ಟೆಗಿಲ್ಲದವರಿಗೆ ಹಂಚಿದರು. ರೆಪ್ಪೆಯನ್ನು ಮುಚ್ಚದೆ ಮೂವರೂ ಹಗಲಿರುಳೂ ದುಡಿಯುತ್ತಿದ್ದರು.

ಬಂಧಿಸಲ್ಪಟ್ಟಿದ್ದ ಅಯ್ಯರು ಪೋಲಿಸು ವಿಚಾರಣೆಯ ಕಾಲದಲ್ಲಿ ದೋಷವೆಲ್ಲಾ ಪಳ್ನಿಸಾಮಿಯಮೇಲೆ ಹೊರಳುವಂತೆ ಕೈಫಿಯತ್ತು ಕೊಟ್ಟ. ಪೋಲಿಸಿನವರು ಒಡನೆಯೇ ಪಳ್ನಿಸಾಮಿಯನ್ನು ಹಿಡಿದುಬಿಟ್ಟರು. ಪಳ್ನಿಸಾಮಿ ಮುಷ್ಕರ ಹಿಡಿದಿದ್ದವರಮನೆಗೆ ಹಗಲಿರುಳೂ ಹೋಗಿ ಬರುವುದು ಎದ್ದು ಕಾಣುತ್ತಿತ್ತು. ಅಲ್ಲದೆ ಅವರಿಗೆಲ್ಲಾ ಅವನು ಮುಖಂಡ; ಮುಷ್ಕರಕ್ಕೆ ಅವನೇ ಕಾರಣ ಎಂದರೆ ಒಡನೆ ನಂಬುವಂತೆಯೂ ಇತ್ತು.

ವಿಚಾರಣೆಯ ದಿನ ಪಳ್ನಿಸಾಮಿಯ ಸರಳವೃತ್ತಿಯಲ್ಲಿ ನ್ಯಾಯಾಧೀಶನಿಗೂ ಅನುಮಾನತಟ್ಟಿತು. ಅಲ್ಲದೆ ಆ ಅಯ್ಯರು ತನ್ನ ಬಿಡುಗಡೆಯ ಸಲುವಾಗಿ ಪಳ್ನಿಸಾಮಿಯಮೇಲೆ ಯಾವ ಯಾವ ಆರೋಪಣೆಯನ್ನು ತರಬಹುದೋ ಅಷ್ಟನ್ನೂ ತೋರಿಸಿಕೊಟ್ಟ. ಪಳ್ನಿಸಾಮಿಯನ್ನು ಕೆಲಸಗಾರರಿಂದ ತಪ್ಪಿಸಿ ತನ್ನ ಸ್ಥಳ ಭದ್ರಮಾಡಿಕೊಳ್ಳಲು ಅಯ್ಯರು ಪ್ರಯತ್ನಪಟ್ಟ. ಪಳ್ನಿಸಾಮಿ ಆ ಕೂಲಿಯವರ ಮಧ್ಯದಲ್ಲಿಯೇ ಇದ್ದರೆ ಇನ್ನು ಮುಂದೆಯೂ ಅನಾಹುತವುಂಟೆಂದು ನ್ಯಾಯಾಧೀಶರು ಅಭಿಪ್ರಾಯಪಟ್ಟು ಅವನನ್ನು ಬಂಧಿಸಿ ಕೊನೆಗೆ ಐದುವರ್ಷ ಕಠಿಣ ಸಜದ ಶಿಕ್ಷೆಯನ್ನೂ ವಿಧಿಸಿದರು. ವಿಚಾರಣೆಯ ಕಾಲದಲ್ಲಿ ಅವನ ಪರವಾಗಿ ವಾದಿಸಿ ನುಡಿದ ಆ ಫ್ಯಾಕ್ಟರಿಯ ಅಧಿಕಾರಿಗೆ ಕೆಲಸದಿಂದಲೂ ವಜಾ ಆಗಿಹೋಯಿತು. ಅಯ್ಯರಿಗೆ ಬಿಡುಗಡೆ ಆಯಿತು. ಪಳ್ನಿಸಾಮಿಯನ್ನು

ವೆಲ್ಲೂರು ಜೈಲಿಗೆ ಸಾಗಿಸಿಬಿಟ್ಟರು. ಪಲ್ನಿಸಾಮಿಯನ್ನು ಕಳೆದುಕೊಂಡ ಮೊದಲೆರಡುದಿನಗಳಲ್ಲಿ ಪಾರ್ಕು ಹಣೆಯಲ್ಲಿ ಕುಂಕುಮವಿಲ್ಲದ ಸುಮಂಗಲಿಯಂತೆ ಕಾಣುತ್ತಿತ್ತು.

ಐದುವರ್ಷಗಳೂ ಉರುಳಿಹೋದವು. ಪಲ್ನಿಸಾಮಿಗೆ ಜೈಲಿನಲ್ಲಿ ಕಷ್ಟ ಹೆಚ್ಚಾಗಿ ತೋರಲಿಲ್ಲ. ಅವನೊಂದಿಗೆ ರಾಜಕೀಯ ಕೈದಿಯೊಬ್ಬರನ್ನು ಬಂಧಿಸಿದ್ದರು. ಆ ರಾಜಕೀಯ ಕೈದಿಯ ಸಹವಾಸದಲ್ಲಿ ವರ್ಷಗಳು ದಿನಗಳಂತೆ ಕಳೆದುಹೋದವು. ಅಲ್ಲದೆ ಆತನ ಸಹವಾಸದಿಂದ ಪಲ್ನಿಸಾಮಿಗೆ ಹಿಂದೂದೇಶದ ಇಂದಿನ ಸ್ಥಿತಿ, ಇಲ್ಲಿನ ರಾಜನೀತಿ, ಹೊರಗಿನ ರಾಜನೀತಿ, ಇತರ ದೇಶಗಳ ರಾಜಕೀಯ ತತ್ವಗಳು ; ಇಂದಿನ ಸಮಾಜನೀತಿ, ಮುಂದಿನ ಸಮಾಜದ ಪ್ರಗತಿ ಇವುಗಳ ಪರಿಚಯ ಉಂಟಾಯಿತು. ವಿಶ್ವದ ಅರಿವು ಆಗ ತೊಡಗಿತು. ಜೈಲಿನಿಂದ ಹೊರಕ್ಕೆ ಬಂದಾಗ ಅವನು ಪುಟಕ್ಕೆ ಹಾಕಿ ಹೊರಕ್ಕೆ ತೆಗೆದ ಚಿನ್ನದಂತೆ ಆಗಿದ್ದ.

ಪಲ್ನಿಸಾಮಿಯ ಒಳ್ಳೆಯ ನಡತೆಯ ಸಲುವಾಗಿ ಅವನಿಗೆ ವಿಧಿಸಿದ್ದ ಐದು ವರ್ಷಗಳ ಸಜದಲ್ಲಿ ರಿಯಾಯಿತಿ ಆಗಿ ಎರಡು ತಿಂಗಳುಗಳ ಮುಂಚೆಯೇ ಅವನಿಗೆ ಬಿಡುಗಡೆಯಾಯಿತು. ಬಿಡುಗಡೆಯಾದೊಡನೆಯೇ ಬೆಂಗಳೂರಿಗೆ ಹೊರಟ.

ಪಲ್ನಿಸಾಮಿಗೆ ಅಲುಮೇಲೂನ ನೋಡಬೇಕೆಂಬ ಆಸೆ ದಿನದಿನಕ್ಕೆ ಹೆಚ್ಚಾಗುತ್ತಿತ್ತು. ಎಂದು ಅವಳನ್ನು ಕಂಡೇನು, ಎಂದು ಅವಳ ಕೈ ಹಿಡಿದು ಮುಂದಿನ ಜೀವನದಲ್ಲಿ ತೊಡಗೇನು, ಸಮಾಜಸೇವೆಯ ಕಂಕಣವನ್ನೀರ್ವರೂ ತೊಟ್ಟು ಎಂದು ಹೊಸ ಜೀವನದಲ್ಲಿ ಕಾಲಿಟ್ಟೇವು, ನಾಲ್ಕು ಜನರ ಕಷ್ಟಸುಖಗಳನ್ನು ವಿಚಾರಿಸಿಕೊಳ್ಳುತ್ತಾ ಎಂದು ನಾವು ನಾಲ್ಕು ಜನರಿಗೆ ಉಪಕಾರಿಗಳಾದೇವು ಎಂದು ಕಾತರಿಸುತ್ತಿದ್ದ. ಜೈಲಿಗೆ ಹೋದಾಗ ಅಲುಮೇಲುವಿನ ಮನಸ್ಥಿತಿಯನ್ನು ಕಂಡು ಮರುಗಿದ್ದ. ಅಗಲಿಕೆ ಇಬ್ಬರಿಗೂ ಸಹಿಸಲಸದಳವಾಗಿತ್ತು. ಅಲುಮೇಲೂನ ಸರಿಯಾಗಿ ನೋಡಿಕೊಂಡಿರಲು ಚಿನ್ನಕಣ್ಣನನ್ನ ಪ್ರಾರ್ಥಿಸಿಕೊಂಡಿದ್ದ.

ಬೆಂಗಳೂರಿಂದ ವೆಲ್ಲೂರು ಜೈಲಿಗೆ ಅವನನ್ನು ವರ್ಗಾಯಿಸಿದಂದಿನಿಂದ ಅವನಿಗೆ ಅಲುಮೇಲು—ಚಿನ್ನಕಣ್ಣ ಅವರ ಸಮಾಚಾರ ಇಲ್ಲ

ದಂತಾಗಿತ್ತು. ಕಾಗದಗಳು ಇಲ್ಲ. ವರ್ತಮಾನ ಇಲ್ಲ. ಒಂದು ವರ್ಷದ ಮೇಲೆ ಅಕಸ್ಮಾತ್ತಾಗಿ ಒಂದು ದಿನ ಫ್ಯಾಕ್ಟರಿಯ ಆ ಅಧಿಕಾರಿಯನ್ನು ವೆಲ್ಲೂರಿನಲ್ಲಿ ಸಂಧಿಸಿದ. ಆಗಲೇ ಪಳ್ನಿಸಾಮಿಗೆ ಅಧಿಕಾರಿಗೆ ಕೆಲಸ ಹೋದ ವಿಚಾರವೂ ಗೊತ್ತಾದುದು. ಆ ಅಧಿಕಾರಿ ಬೆಂಗಳೂರಿಗೆ ಹೋಗಿದ್ದಾಗ ಚಿನ್ನಕಣ್ಣ ಸಿಕ್ಕಿದ್ದನಂತೆ. ಚಿನ್ನಕಣ್ಣ ಈಗ ಫ್ಯಾಕ್ಟರಿ ಯಲ್ಲಿಯೇ ಕೆಲಸಮಾಡಿಕೊಂಡಿದ್ದಾನೆ, ಹಲಸೂರಿನಲ್ಲಿ ಅದೇ ಮನೆಯಲ್ಲಿ ವಾಸವಾಗಿದ್ದಾನೆ ಎಂದು ಪಳ್ನಿಸಾಮಿಗೆ ಹೇಳಿದ್ದ. ಅಲಮೇಲುವಿನ ವಿಷಯವಾವುದೂ ಅವನಿಗೆ ತಿಳಿದಿರಲಿಲ್ಲ. ಆದುದರಿಂದ ಬೆಂಗಳೂರಿನಲ್ಲಿ ರೈಲನ್ನು ಇಳಿದವನೇ ಅಲಮೇಲು-ಚಿನ್ನಕಣ್ಣನನ್ನು ಕಾಣಲು ನೇರಾಗಿ ಹಲಸೂರಿಗೆ ಹೊರಟ.

ಪಳ್ನಿಸಾಮಿ ಹಲಸೂರನ್ನು ತಲುಪಿದಾಗ ಸಂಜೆ ಆರುಗಂಟೆಯಾಗಿತ್ತು. ಅವನು ಹಿಂದೆ ವಾಸಮಾಡುತ್ತಿದ್ದ ಬೀದಿಗೆ ಬಂದು ನೋಡುತ್ತಾನೆ ಆ ಬೀದಿ ಗುರುತೇ ಸಿಕ್ಕದಹಾಗಾಗಿದೆ. ಬೆಂಗಳೂರು ದಿನದಿನಕ್ಕೆ ಬದಲಾಯಿಸುತ್ತಿದೆ. ರಸ್ತೆಗಳು ವಿಶಾಲವಾಗುತ್ತಿವೆ. ಮಣ್ಣಿನ ಮನೆಗಳು ಹೋಗಿ ಗಾರೆ ಕಟ್ಟಡಗಳಾಗಿವೆ. ಮಂಗಳೂರು ಹೆಂಚುಗಳ ಸ್ಥಳದಲ್ಲಿ ಸಿಮೆಂಟಿನ ಮೇಲ್ಚಾವಣಿಗಳು ಎದ್ದಿವೆ. ಬೀದಿಗಳಲ್ಲೂ, ಮನೆಗಳಲ್ಲೂ ಎಷ್ಟು ಬದಲಾವಣೆ ಕಂಡರೂ ಜನರಲ್ಲೇನೂ ಬದಲಾವಣೆ ಕಾಣಲಿಲ್ಲ. ಅವರ ಜೀವನ ಎಂದಿನಂತೆಯೇ ಇದೆ. ಬಡತನವಂತೂ ಬೇರೂರಿದೆ. ಹೊದೆಯಲು ಹರಕಲು ಬಟ್ಟೆ; ತಿನ್ನಲು ರಾಗಿಯರೊಟ್ಟೆ. ಆ ಬೀದಿಯಲ್ಲಿ ವಾಸಿಸುತ್ತಿದ್ದ ಜನರು ಮತ್ತೆಲ್ಲಿಗೂ ಹೋಗಿರಲಿಲ್ಲ. ಅವರ ಮಕ್ಕಳು ಬೀದಿಯಲ್ಲಿಯೇ ಆಡುತ್ತಿದ್ದಾರೆ. ಆದರೆ ಆ ಐದು ವರ್ಷಗಳಲ್ಲಿ ಎಷ್ಟು ಬೆಳೆದಿದ್ದಾರೆ. ಆ ಮಕ್ಕಳಿಗೆ ತಿಂಡಿ ಕೊಡಿಸಬೇಕೆನಿಸಿತು. ಆ ಮಕ್ಕಳೆಲ್ಲರನ್ನೂ ಹತ್ತಿರಕ್ಕೆ ಕರೆದು ಅಂಗಡಿಗೆ ಕರೆದುಕೊಂಡುಹೋದ. ಆ ಮಕ್ಕಳ ನಡುವೆ ಎರಡು ವರ್ಷದ ಮಗುವೊಂದಿತ್ತು. ನೋಡಲು ಬಹಳ ಮುದ್ದಾಗಿತ್ತು. ಅದನ್ನು ಎತ್ತಿಕೊಂಡು ಮುದ್ದಿಸಿ ಅದಕ್ಕೆ ಚಾಕಲೇಟನ್ನು ತೆಗೆಸಿಕೊಟ್ಟ. ಇತರ ಮಕ್ಕಳಿಗೆ ಪೆಪ್ಪರಮೆಂಟನ್ನು ಕೊಂಡು ಕೊಟ್ಟ.

ಪಲ್ನಿಸಾಮಿಯನ್ನು ಗುರುತಿಸುವುದಕ್ಕೆ ಅಂಗಡಿಯವನಿಗೆ ಬಹಳ ಹೊತ್ತು ಹಿಡಿಯಿತು. ಗುರುತು ಸಿಕ್ಕಿದ ಮೇಲೆ ಪಲ್ನಿಸಾಮಿಯಿಂದ ಅವನ ಆ ಐದು ವರ್ಷಗಳ ವೃತ್ತಾಂತವನ್ನೆಲ್ಲಾ ಕೇಳಿ ತಿಳಿದುಕೊಂಡ. ಅಂಗಡಿಯವನಿಂದ ಪಲ್ನಿಸಾಮಿಗೆ ಅಲಮೇಲು ಮತ್ತು ಚಿನ್ನಕಣ್ಣ್ ಅದೇ ಮನೆಯಲ್ಲಿಯೇ ಇನ್ನೂ ವಾಸವಾಗಿರುವರೆಂದು ತಿಳಿಯಿತು. ಅವರ ವೃತ್ತಾಂತವನ್ನೆಲ್ಲಾ ಅಂಗಡಿಯವನು ಬಿತ್ತರಿಸುವುದಕ್ಕೆ ತೊಡಗುವುದ ರೊಳಗಾಗಿ ಬೀದಿಯಲ್ಲೊಂದು ಅನಾಹುತ ನಡೆಯುವುದರಲ್ಲಿತ್ತು. ಪಲ್ನಿ ಸಾಮಿ ಚಾಕೋಲೇಟನ್ನು ಕೊಡಿಸಿಕೊಟ್ಟ ಮಗು ಅದನ್ನು ತಿನ್ನುತ್ತಾ ಮನೆಯಕಡೆಗೆ ಓಡುತ್ತಿರಲು ಅಲ್ಲಿ ಬರುತ್ತಿದ್ದ ಬೈಸಿಕಲ್ಲೊಂದಕ್ಕೆ ಡಿಕ್ಕಿ ಹೊಡೆದುಬಿಟ್ಟಿತು. ಪಲ್ನಿಸಾಮಿ ಒಡನೆ ಮಗು ಬಿದ್ದೆಡೆಗೆ ಓಡಿದ. ಅದಕ್ಕೆ ಹೆಚ್ಚಾಗೇನೂ ಪೆಟ್ಟಾಗಿರಲಿಲ್ಲ. ಬಿದ್ದ ಗಾಭರಿಗೇ ಅಳುವುದಕ್ಕೆ ಆರಂಭಿಸಿತ್ತು. ಪಲ್ನಿಸಾಮಿ ಅದನ್ನು ಎತ್ತಿಕೊಂಡು ಸಮಾಧಾನಪಡಿಸು ತ್ತಿದ್ದ. ಅದರ ಅಳುವಿನ ದನಿ ಕೇಳಿ ಅದರ ತಾಯಿ ಓಡಿಬಂದಳು. ಆಕೆಯನ್ನು ಪಲ್ನಿಸಾಮಿ ನೋಡುತ್ತಾನೆ; ಅಲಮೇಲು! ಏನಾಗಿ ಹೋಯಿತು ಎಂದು ಅದರ ತಂದೆ ಬಾಗಿಲಿಂದ ಹೊರಕ್ಕೆ ತಲೆ ಹಾಕಿದ. ಅವನು ಚಿನ್ನಕಣ್ಣ್!

ಪಲ್ನಿಸಾಮಿಗೆ ಅರೆಚಣದಲ್ಲಿ ವಿಚಾರ ವೇದ್ಯವಾಯಿತು. ಇನ್ನು ಇಲ್ಲಿದ್ದರೆ ಅವರುಗಳಿಗೆ ತಾನು ಬಂದಿರುವುದು ಗೊತ್ತಾಗುವುದು; ಅದರಿಂದ ಅವರ ಒಲುವಿನ ನಡುವೆ ತಾನು ಬಂದಂತಾಗಿ ಅನಾಹುತವಾಗುವುದು ಎಂದುಕೊಂಡು ಅವರು ಅವನನ್ನು ಗುರುತಿಸುವುದರೊಳಗಾಗಿ ಮಗು ವನ್ನು ಕೆಳಗಿರಿಸಿ ಅಲ್ಲಿಂದ ಹೊರಟುಬಿಟ್ಟ.

ಕೆನ್‌ಸಿಂಗ್‌ಟನ್ ಪಾರ್ಕಿಗೆ ಅವನು ಬಂದಾಗ ಪಾರ್ಕು ನಿರ್ಜನ ವಾಗಿತ್ತು. ಪಾರ್ಕಿನ ಈ ಕೊನೆಯಿಂದ ಆ ಕೊನೆಯವರೆಗೆ ಹೋಗಿ ಸುತ್ತಾಡಿದ. ಅಲ್ಲಿದ್ದ ಹಿಂದಿನ ಗಿಡಮರಗಳನ್ನೆಲ್ಲಾ ಹಿಂದಿನ ಮಮತೆ ಯಿಂದ ಸಂದರ್ಶಿಸಿದ. ಅವನಿಗೆ ಪಾರ್ಕು ಹೆಚ್ಚು ಬದಲಾವಣೆ ಹೊಂದಿದ್ದ ಹಾಗೆ ಕಾಣಲಿಲ್ಲ. ತಾನು ನಿತ್ಯವೂ ಕೂಡುತ್ತಿದ್ದ ಸ್ಥಳದಲ್ಲಿ ಹೋಗಿ ಕುಳಿತುಕೊಂಡ. ಹಿಂದಿನ ದಿನಗಳ ನೆನಪು ಬಂದಿತು. ಹಾಗೇ ಸಿಳ್ಳೆ

ಹಾಕಲು ಆರಂಭಿಸಿದ. ಸಂಜೆ ಕಳೆಯಿತು; ಕತ್ತಲು ಮುಸಕಿತು. ಪಾರ್ಕಿನ ಮಾಲಿ ಅಲ್ಲಿಗೆ ಬಂದ. ಮಾಲಿಗೆ ಪಳ್ನಿಸಾಮಿಯ ದನಿ ಕೇಳಿಸಿತು. ಪಳ್ನಿಸಾಮಿ ಅವನನ್ನು ಹತ್ತಿರಕ್ಕೆ ಕರೆದ. ಅವನು ಜೈಲಿನಿಂದ ಹಿಂತಿರುಗಿದವನೆಂದು ಅಸಡ್ಡೆಗೊಂಡನೋ ಅಥವ ಪಳ್ನಿಸಾಮಿಯ ಭೂತವೆಂದು ಹೆದರಿಕೊಂಡನೋ ಅಂತೂ ಅವನಿದ್ದೆಡೆ ಹೋಗದೆ ತನ್ನ ಕೊಠಡಿಯಲ್ಲಿ ಅವಿತುಕೊಂಡ. ಆಮೇಲೆ ಪಳ್ನಿಸಾಮಿ ಎಷ್ಟುಹೊತ್ತು ಅಲ್ಲಿದ್ದನೋ, ಅಲ್ಲಿಂದ ಎದ್ದು ಎಲ್ಲಿಗೆ ಹೋದನೋ ಕೊನೆಗೆ ಏನಾದನೋ ಯಾರೂ ಅರಿಯರು.

ಮಾರನೆಯ ದಿನ ಬೆಳಿಗ್ಗೆ ಪಳ್ನಿಸಾಮಿ ಅಲ್ಲಿಗೆ ಬಂದಿದ್ದನೆನ್ನುವುದು ಅಂಗಡಿಯವನಿಂದ ಅಲಮೇಲು–ಚಿನ್ನಕಣ್ಣನಿಗೆ ಗೊತ್ತಾಯಿತು. ಆಮೇಲೆ ಅವರು ಹೋಗಿ ಪಾರ್ಕಿನಲ್ಲಿ ವಿಚಾರಿಸಿದರು. ಮಾಲಿ ತಾನು ಕಂಡ ದೃಶ್ಯವನ್ನು ಹೇಳಿದ. ಅಂತೂ ಕೈಗೆ ಬಂದ ತುತ್ತು ಬಾಯಿಗೆ ಇಲ್ಲದಂತಾಯಿತು ಎಂದು ಎಲ್ಲರೂ ಪೇಚಾಡಿದರು.

* * * *

ಈಗಲೂ ಸಂಜೆಯಲ್ಲಿ ಅಲಮೇಲು, ಚಿನ್ನಕಣ್ಣ್, ಅವರ ಮಗು ಎಲ್ಲರೂ ಪಾರ್ಕಿಗೆ ಬರುತ್ತಾರೆ. ಅವರಿಗೆ ಅಲ್ಲಿ ಪಳ್ನಿಸಾಮಿ ಸಿಳ್ಳೆ ಹೊಡೆಯುತ್ತಿರುವ ಹಾಗೆ ಭಾಸವಾಗುವುದು. ಮರದ ಕೆಳಗೆ ಅವನ ಆ ಸ್ಥಳದಲ್ಲಿ ಕುಳಿತಿರುವಂತೆ ಭ್ರಾಂತಿಗೊಳ್ಳುವರು. ಅವನ ನಗೆ ಪಾರ್ಕಿನ ಮೂಲೆಮೂಲೆಗಳಲ್ಲಿ ಪ್ರತಿಧ್ವನಿತವಾದಹಾಗೆ ತೋರುವುದು.

ಫ್ಯಾಕ್ಟರಿಯ ಕೂಲಿಗಾರರು ಪಳ್ನಿಸಾಮಿಯನ್ನು ಮರೆತರೇ? ಪಳ್ನಿಸಾಮಿಯನ್ನು ನೆನೆಸಿಕೊಂಡೊಡನೆಯೇ ಅವರಿಗೆ ಪಾರ್ಕು ನೆನಪಿಗೆ ಬರುವುದು. ಪಾರ್ಕನ್ನು ಕಂಡೊಡನೆ ಅವರಿಗೆ ಪಳ್ನಿಸಾಮಿಯ ನೆನಪು. ಇಂದು ಅವರಿಗೆ ಈ ಪಾರ್ಕು ಕೆನ್‌ಸಿಂಗ್‌ಟನ್ ಪಾರ್ಕಲ್ಲ; ಇದು ಪಳ್ನಿಸಾಮಿ ಪಾರ್ಕು. ನೋಡುತ್ತಿರಿ, ನಾಳೆ ಮುನಿಸಿಪಾಲಟಿಯು ಆಡಳಿತ ಬದಲಾಗಲಿ, ಈ ಪಾರ್ಕಿಗೆ "ಪಳ್ನಿಸಾಮಿ—ಪಾರ್ಕ್" ಎಂದು ಹೆಸರಿಟ್ಟು, ಇಲ್ಲಿ ಶಿಲಾಶಾಸನ ನೆಡಿಸುತ್ತಾರೆ.

ಪಳ್ನಿಸಾಮಿ ಏನಾದ ಎನ್ನುವಿರೋ ಅವನ ಮುಂದಿನ ಜೀವನದ ಮಾರ್ಗ ಈ ಪಾರ್ಕ್ ತೋರಿಸಿ ಕಳುಹಿಸಿಕೊಟ್ಟಿದೆ. ಈಗ ಅವನು ಹಿಂದಿನ ಪಳ್ನಿಸಾಮಿಯಲ್ಲ; ನಾಳಿನ ಭಾರತದ ಗಣ್ಯವ್ಯಕ್ತಿಯಾಗುತ್ತಿದ್ದಾನೆ. ಅವನ ಕಾರ್ಯಕಲಾಪ ನಾನಿನ್ನು ಬರೆಯಬೇಕಾಗಿಲ್ಲ; ವೃತ್ತಪತ್ರಿಕೆಗಳೇ ತಿಳಿಸುತ್ತವೆ. ಒಂದು ದಿನ ನಾನೂ ಪುಸ್ತಕರೂಪದಲ್ಲಿ ಬರೆದೇನು.

# ಪಾರ್ಕಿನ ಲಚುಮಿ

ಕೆನ್‌ಸಿಂಗ್‌ಟನ್ ಪಾರ್ಕು ಬೆಂಗಳೂರಿನ ದಂಡಿನಲ್ಲಿದೆ. ಬೆಂಗಳೂರು ಇಂದು ಕನ್ನಡನಾಡಿನ ಕೇಂದ್ರಸ್ಥಾನವಾಗಿದ್ದು, ಕನ್ನಡಸಂಸ್ಕೃತಿಯ ಪೀಠವಾಗಿದ್ದರೂ ಅದಕ್ಕೆ ಸೇರಿದ ದಂಡಿನಲ್ಲಿ ಆ ಸಂಸ್ಕೃತಿಯನ್ನು ಕಾಣುವುದು ಅತಿವಿರಳ. ಅಲ್ಲಿನ ಆಡಳಿತ ಬ್ರಿಟಿಷರಿಗೆ ಸೇರಿದೆ. ಅಲ್ಲಿನ ಜನ ಆಂಗ್ಲರು, ಆಂಗ್ಲೋ-ಇಂಡಿಯನರು, ತಮಿಳರು. ಕನ್ನಡಿಗರ ಸಂಖ್ಯೆ ಬಹಳ ಕಡಿಮೆ. ಅಲ್ಲಿ ಇಲ್ಲಿ ಕೆಲವು ಕನ್ನಡಿಗರ ಮನೆಗಳಿವೆ. ಡಾಕ್ಟರುಗಳೂ, ಲಾಯರುಗಳೂ, ಅಧಿಕಾರಿಗಳೂ ಇದ್ದಾರೆ. ಕೆನ್‌ಸಿಂಗ್‌ಟನ್ ಪಾರ್ಕಿನ ಬಳಿಯಲ್ಲೇ ಎರಡು ಕನ್ನಡಿಗರ ಸಂಸಾರಗಳಿವೆ. ಅವರ ಮಕ್ಕಳನ್ನು ಆಳುಗಳು ಪ್ರತಿದಿನವೂ ಪಾರ್ಕಿಗೆ ಕರತರುವುದುಂಟು. ಆ ಮಕ್ಕಳ ಆಟ ಪಾಟ ವಿನೋದ ಕೇಳಿಯು ಪಾರ್ಕಿನಲ್ಲಿ ಕನ್ನಡ ಸಂಸ್ಕೃತಿಯ ವಾತಾವರಣವನ್ನು ಕಟ್ಟುವುದು; ಸೋಫಾಗಳಿಂದ ಸುಸಜ್ಜಿತವಾದ ಕೊಟ್ಟಡಿಯಲ್ಲಿ ಹಚ್ಚಿಸಿಟ್ಟದ್ದ ಊದನಬತ್ತಿಯಂತೆ.

ಲಚುಮಿ ಸರಸ್ವತಮ್ಮನ ಮನೆಯ ಒಕ್ಕಲುಗಿತ್ತಿ. ಕೆನ್‌ಸಿಂಗ್‌ಟನ್ ಪಾರ್ಕಿನ ಬಳಿ ಎರಡು ಕನ್ನಡಿಗರ ಮನೆಯಿದೆಯೆಂದು ಹೇಳಿದ್ದೆನಲ್ಲಾ ಒಂದು ಸರಸ್ವತಮ್ಮನವರದು ಇನ್ನೊಂದು ಶ್ರೀನಿವಾಸರಾಯರದು. ಸರಸ್ವತಮ್ಮ ಡಾಕ್ಟರು. ಎರಡು ವರುಷಗಳ ಹಿಂದೆ ಲಚುಮಿಯ ತಾಯಿ ಖಾಯಿಲೆಯಾಗಿ ಸರಸ್ವತಮ್ಮನ ಬಳಿಗೆ ಬಂದಿದ್ದಳು. ಆಗ ಲಚುಮಿಯನ್ನು ಅವರ ಮನೆಯಲ್ಲಿ ಬಿಟ್ಟುಹೋದಳು. ಅವಳ ತಂದೆ ಯಾರು? ಇದ್ದಾನೋ ಇಲ್ಲವೋ ತಿಳಿಯದು. ಅವಳನ್ನು ಅಲ್ಲಿ ಬಿಟ್ಟು ತಾಯಿಯಾದವಳು ಎಲ್ಲಿಗೆ ಹೋದಳೋ ಅದನ್ನೂ ಯಾರೂ ಅರಿಯರು. ಪ್ರಪಂಚ ದೊಡ್ಡದು; ಎಲ್ಲೋ ಅವಳು ಸಂಸಾರ ಮಾಡಿಕೊಂಡಿರಬಹುದು. ಅಂತೂ ಲಚುಮಿ ತಬ್ಬಲಿ. ಇನ್ನೂ ಹುಡುಗಿ. ಸರಸ್ವತಮ್ಮನವರು ಅವಳ ವಿಷಯದಲ್ಲಿ ಬಹಳ ದಯೆ ತೋರಿಸುತ್ತಿದ್ದರು. ಅವರ ಮಕ್ಕಳನ್ನು ಸಂಜೆ ಪಾರ್ಕಿಗೆ ಕರೆದುಕೊಂಡು ಹೋಗುವುದೊಂದೇ ಅವಳಿಗಿದ್ದ ಕೆಲಸ.

ಲಚುಮ ಕನ್ನಡನಾಡಿನ ಹಳ್ಳಿಯ ಹೈದ. ಅವನೂ ತಬ್ಬಲಿಯಾಗಿ ಬೆಂಗಳೂರನ್ನು ಸೇರಿದ್ದ. ಮೇಲೆ ಹೇಳಿದ ಬ್ಯಾರಿಷ್ಟರ್ ಶ್ರೀನಿವಾಸ ರಾಯರ ಮನೆಯಲ್ಲಿ ಆಳಾಗಿ ನಿಂತು ಆರುತಿಂಗಳಾಗಿತ್ತು. ಅವನಿಗಿದ್ದ ಕೆಲಸ ಮನೆಯ ಮುಂದಿನ ತೋಟವನ್ನು ನೋಡಿಕೊಳ್ಳುವುದು ; ಸಂಜೆ ಯಾದೊಡನೆ ಮಕ್ಕಳನ್ನು ಪಾರ್ಕಿಗೆ ಕರೆದುಕೊಂಡುಹೋಗುವುದು.

ಜಯು, ಶಾಂತು ಎಂದಿಬ್ಬರು ಸರಸ್ವತಮ್ಮನ ಮಕ್ಕಳು. ಅವರು ಇನ್ನೂ ಚಿಕ್ಕವರು. ಬಹಳ ನಯ ; ಸೂಕ್ಷ್ಮಜೀವಿಗಳು. ಕತೆ ಕೇಳು ವುದರಲ್ಲಿ ಅವರಿಗೆ ಬಹಳ ಆಸೆ. ಶಾಂತು ಕಾಲು ಮುರಿದುಕೊಂಡಿದ್ದರೂ ಪೆರಾಂಬ್ಯುಲೇಟರಲ್ಲಿ ಕುಳಿತು ಲಚುಮಿಯೊಡನೆ ಪಾರ್ಕಿಗೆ ಬರುತ್ತಿದ್ದಳು; ಲಚುಮನಿಂದ ಕತೆ ಹೇಳಿಸಿ ಕೇಳುವುದಕ್ಕೋಸ್ಕರ.

ಶ್ರೀನಿವಾಸರಾಯರ ಮಕ್ಕಳ ಪೈಕಿ ಸಾತು ಹಿರಿಯವಳು. ಅವಳ ವಯಸ್ಸು ಎಂಟೋ—ಒಂಬತ್ತೋ. ಅವಳಿಗೆ ಓದಿಗಿಂತ ಆಟದಲ್ಲಿ ಹೆಚ್ಚು ಪ್ರೀತಿ. ಅವಳನ್ನು ಆಂಗ್ಲರ ಶಾಲೆಗೆ ಕಳುಹಿಸುತ್ತಿದ್ದರು. ಆದರೂ ಅವಳು ಶಾಲೆ ಮುಗಿದೊಡನೆ ತನ್ನ ಬೊಂಬೆಯನ್ನು ತೆಗೆದು ಕೊಂಡು ಇತರ ಮಕ್ಕಳೊಂದಿಗೆ ಆಟಕ್ಕೆ ಬಂದುಬಿಡುವಳು. ಅವಳ ತಂಗಿ ಪದ್ದು. ಅವಳಂತೂ ಪೆದ್ದು. ಎಲ್ಲರೂ ಅವಳನ್ನು ಗೋಳು ಹೊಯ್ದು ಕೊಳ್ಳುವರು. ಕೊನೆಯವನು ನಾಣಿ. ಅವನು ಪಟಿಂಗ. ಅವನಿನ್ನೂ ಶಾಲೆಗೆ ಸೇರಿರಲಿಲ್ಲ. ಕಿಟ್ಟು, ಕೂಸು, ಶ್ರೀನಿವಾಸರಾಯರ ಮೊದಲ ಹೆಂಡತಿಯ ಮಗಳ ಮಕ್ಕಳು. ಅವರನ್ನು ಗಾಡಿಯಲ್ಲಿ ಕೂಡಿಸಿಕೊಂಡು ಲಚುಮ ಪಾರ್ಕಿಗೆ ಬರುತ್ತಿದ್ದ.

ಶ್ರೀನಿವಾಸರಾಯರೂ ಅವರ ಕುಟುಂಬ ಸಂಜೆಯಲ್ಲಿ ಆಗಾಗ ಪಾರ್ಕಿಗೆ ನಡೆದುಕೊಂಡು ಬರುವುದುಂಟು. ಹೆಚ್ಚಾಗಿ ತಮ್ಮ ಮಕ್ಕ ಳಿರುವ ಕಡೆ ಬರುತ್ತಿರಲಿಲ್ಲ. ಒಂದೊಂದು ದಿನ ಮಕ್ಕಳು ಏನು ಮಾಡುತ್ತಿದ್ದಾರೋ ನೋಡೋಣವೆಂದು ಬಂದು ಮಕ್ಕಳನ್ನು ಮುದ್ದಿಸಿ ಹೊರಟುಹೋಗುವರು.

# ಪೂರ್ವಾರ್ಧ

## ಮೊದಲನೆಯ ದೃಶ್ಯ

[ತೆರೆಯು ಮೇಲಕ್ಕೆ ಎದ್ದಾಗ ಪಾರ್ಕಿನ ಆವರಣ ಕಾಣುವುದು. ನಾಣಿ ಕೈಯಲ್ಲೊಂದು ಕರ್ಪೂರದ ಬೊಂಬೆಯನ್ನು ಹಿಡಿದುಕೊಂಡು ಓಡಿಬರುವನು. ಅವನ ಹಿಂದೆ ಸಾತು ಅವನನ್ನು ಕೂಗಿಕೊಂಡು ಬರುವಳು.]

ಸಾತು—ಏ ನಾಣೀ, ಗೀಣೀ, ಮಗೂನ ಎಲ್ಲಿಗೆ ಕರಕೊಂಡು ಹೋಗುತೀಯೋ. ಈಗತಾನೆ ಅದಕ್ಕೆ ಸ್ನಾನ ಮಾಡಿಸಿದ್ದೇನೆ. ಬಟ್ಟೆ ಹಾಕಬೇಕುಕಣೋ.

ನಾಣಿ—ಅದಕ್ಕೆ ಹಾಲನ್ನೂ ಕುಡಿಸಬೇಕೋ ?

ಸಾತು—ಹೌದುಕಣೋ, ಅದಕ್ಕೆ ಹಾಲನ್ನೂ ಹಾಕಬೇಕು. ಹೊಟ್ಟೆ ಹಸಿಯುತ್ತೆ ಅಂತ ಕಾಣುತ್ತೆ.

ನಾಣಿ—ಅದಕ್ಕೇ ಅಳುತಾ ಇದೆ ನೋಡು.

(ಬೊಂಬೆಯನ್ನು ತನ್ನ ಮುಖದ ಹತ್ತಿರ ಇಟ್ಟುಕೊಂಡು, ಅದು ಅಳುತ್ತಿರುವಂತೆ ತಾನು ಧ್ವನಿಮಾಡಿ ಅಣಕಿಸುವನು.)

ಸಾತು—ನೋಡೋ ಅಳುತಾ ಇದೆ. ಕೊಡೋ ಇಲ್ಲಿ.

ನಾಣಿ—ಅಳಲಿ, ಅಳಲಿ. ನಾನು ಅದನ್ನು ನಿನಗೆ ಕೊಡುತೀನಿ ಅಂತಿದ್ದೀಯೇನು. ಎಂದಿಗೂ ಕೊಡೋದಿಲ್ಲ ಕಂಡ್ಯಾ.

ಸಾತು—ಕೊಡದೇ ಇದ್ದರೆ ನಾನು ಬಿಡುತೀನೇನು ?

(ಅವನ ಹತ್ತಿರಕ್ಕೆ ಬಂದು ಅದನ್ನು ಕಿತ್ತುಕೊಳ್ಳಲು ಹೋಗುವಳು. ನಾಣಿ ಅದನ್ನು ಕೊಡದೆ ಅವಳನ್ನು ಕಾಡಿಸುವನು. ಇಬ್ಬರೂ ಕಚ್ಚಾಡುವರು. ಬೊಂಬೆಯ ಒಂದು ಕಾಲು ಕಿತ್ತುಬರುವುದು. ನಾಣಿಯ ಕೈಯ್ಯನ್ನು ಅವಳು ಕಚ್ಚುವಳು. ನಾಣಿ ಬೊಂಬೆಯನ್ನು ಕೈಯಿಂದ ಬಿಟ್ಟುಬಿಟ್ಟು ಅವಳ ಕೆನ್ನೆಯನ್ನು ಜಿಗಟುವನು. ಅವಳು ಅದರ ಕಡೆಗೆ ಲಕ್ಷ್ಯಮಾಡದೆ ಬೊಂಬೆಯನ್ನು ಕಿತ್ತುಕೊಂಡು)

ಅಣ್ಣನಿಗೆ ಹೇಳಿ ನಿನಗೆ ಮಾಡಿಸುತ್ತೇನೆ ನೋಡು, ಲಚುಮು ಈಗ ಬರಲಿ ಅವನ ಕೈಯಿಂದ ನಿನ್ನನ್ನ ಚೆನ್ನಾಗಿ ಹೊಡೆಸುತೀನಿ.

(ಮತ್ತೊಂದುಸಲ ಅವನ ಕೈಹಿಡಿದು ಕಚ್ಚಿ ಓಡಿಬಿಡುವಳು.)

ನಾಣಿ—ಏ

ಸಾತಿ, ಪಾತಿ, ಕೋತಿ,
ಕೋತಿ, ಹೆಣ್ಣುಕೋತಿ,
ನೋಡೆ ನಿನ್ನ ರೀತಿ,
ಕೆಂಪಗಾಯ್ತು ಮೂತಿ.

(ಕೈಯನ್ನು ನೋಡಿಕೊಂಡು ಅಳುವನ್ನು ನುಂಗುತ್ತಿರುವನು. ಪೆರಾಂಬ್ಯುಲೇಟರಲ್ಲಿ ಕಿಟ್ಟುವನ್ನೂ ಕೂಸನ್ನೂ ಕೂಡಿಸಿಕೊಂಡು ಬರುತ್ತಿದ್ದ ಲಚುಮ ಅವರಿಬ್ಬರ ಜಗಳ ನೋಡಿ ಅಲ್ಲಿಗೆ ಜಾಗ್ರತೆ ಬರುವನು. ಜೊತೆಯಲ್ಲಿ ಪದ್ದು ನಡೆದುಕೊಂಡು ಬರುತ್ತಿರುವಳು. ನಾಣಿ ಅಳುತ್ತಿರುವುದನ್ನು ಕಂಡು ಅವಳಿಗೆ ಸಂತೋಷ ಆಗುವುದು.)

ಪದ್ದು— ಕೋತಿಕೈಲಿ ಕಚ್ಚಿಸಿಕೊಂಡು
ಕೈ ಮೈ ರಕ್ತಮಾಡಿಕೊಂಡು
ಅಳ್ತಾನಪ್ಪ ನಾಣಿ
ಅಳುಪುರಕಪ್ಪ ನಾಣಿ

ನಾಣಿ—ಏ, ಪದ್ದಿ ಗೊದ್ದಿ, ಹೆಂಟಿಗೊದ್ದಿ
ನಿನ್ನನ್ನ ಗುದ್ದೀ ಗುದ್ದೀ

(ಪದ್ದು ಬೆನ್ನಿನಮೇಲೆ ಗುದ್ದುವುದಕ್ಕೆ ಹೋಗುವನು. ಲಚುಮ ಅವರನ್ನು ಬಿಡಿಸುವನು.)

ಲಚುಮ—ಏನು ನಾಣಪ್ಪನೋರೆ, ಸಾತಮ್ಮನೋರನ್ನ ಕೋತಿಗೀತಿ ಅಂತೀರಿ ; ನೀವೆ ಕೋತಿಹಂಗೆ ಆಡತೀರಲ್ಲಾ.

ನಾಣಿ—ನೀನೊಬ್ಬ ಬಂದ್ಯೇನೊ ?

(ಲಚುಮನ ಭುಜದಮೇಲೆ ಗುದ್ದುವುದಕ್ಕೆ ಹೋಗುವನು.)

ಲಚುಮ—(ನಾಣಿ ಗುದ್ದುವುದಕ್ಕೆ ಬೆನ್ನನ್ನ ಸರಿಯಾಗಿ ಕೊಟ್ಟು) ಊಂ. ಗುದ್ದು ತೀರೇನು. ಗುದ್ದಿ ಗುದ್ದಿ. ನಿಮ್ಮ ರೋಷಾನೆಲ್ಲಾ ತೀರಿಸಿಕೊಂಡು ಬಿಡಿ. ಸಾತಮ್ಮನೋರನ್ನ ಎಷ್ಟೆಷ್ಟು ಹೊಡೀಬೇಕು ಅಂತಿದ್ದರೋ ಅಷ್ಟನ್ನೂ ನನಗೇ ಹೊಡೆದುಬಿಡಿ.

(ಹಾಗೇ ಬಗ್ಗಿ ನಿಂತಿರುವನು. ನಾಣೀಗೆ ಹೊಡೆದು ಹೊಡೆದು ಕೈ ನೋವುಂಟಾಗುವುದು. ಗಾಡಿಯಲ್ಲಿದ್ದ ಮಕ್ಕಳು ಕಿರಿಚಿಕೊಳ್ಳುವವು. ಸಾತು ಪದ್ದು

ನಾಣಿಯನ್ನು ಹಿಡಿದುಕೊಳ್ಳಲು ಹೋಗುವರು. ನಾಣಿಗೆ ಸಾಕಾಗಿ ಸುಮ್ಮನಾಗುವನು. ಲಚುಮ ಸರಿಯಾಗಿ ಎದ್ದು ನಿಂತು)

ಲಚುಮ—ಇನ್ನು ಬನ್ನಿ ಆಟ ಆಡೋಣ. ಅಗೋ ನೋಡಿ ಅಲ್ಲಿ ಜಯು ಶಾಂತು ಬರುತ್ತಿದ್ದಾರೆ.

ಸಾತು—ಲಚುಮಾ, ನನ್ನ ಮಗೂ ಕಾಲನ್ನು ಮುರಿದುಹಾಕಿದ್ದಾನೋ ಈ ನಾಣಿ.

ಲಚುಮ—ಅಷ್ಟೇತಾನೆ. ನಾನು ಸರಿಮಾಡಿಕೊಡುತೇನೆ. ಎಲ್ಲಿ ಕೊಡಿ ಇಲ್ಲಿ ಅದನ್ನ.

(ಬೊಂಬೆಯನ್ನು ತೆಗೆದುಕೊಂಡು ಸರಿಮಾಡಲು ಯತ್ನಿಸುತ್ತಿರುವನು. ಅದು ಸರಿಹೋಗುವುದಿಲ್ಲ. ಹೇಗೆ ಮಾಡುವುದು ಎಂದು ಯೋಚನೆಯಲ್ಲಿರುವಾಗ ಜಯು ಶಾಂತು ಪೆರಾಂಬ್ಯುಲೇಟರನ್ನು ಹಿಡಿದುಕೊಂಡು ಹಾಡುತ್ತಾ ಬರುವರು. ಹಿಂದೆ ಲಚುಮಿ ಬರುತ್ತಿರುವಳು.)

ಜಯು, ಶಾಂತು— ಆಡೋಣ ನಾವು
ಆಡೋಣ ಬನ್ನಿ
ಓಡೋಣ ನಾವು
ಹಾಡೋಣ ಬನ್ನಿ
ಕುಣಿಯೋಣ ನಾವು
ಮಣಿಯೋಣ ಬನ್ನಿ

(ಜಯು ಶಾಂತು ಇಬ್ಬರೂ ಪ್ರವೇಶಿಸಿ ಸಾತು ಪದ್ದು ಇವರುಗಳ ಕೈಯನ್ನು ಹಿಡಿದು ಕುಣಿಯುವುದಕ್ಕೆ ಮೊದಲುಮಾಡುವರು. ನಾಣಿಯ ಕೋಪ ಅಡಗಿ ಹೋಗುವುದು. ನಾಣಿಯೂ ಅವರೊಡನೆ ಸೇರಿಕೊಳ್ಳುವನು. ಎಲ್ಲರೂ ಸಂತೋಷದಿಂದ ಕುಣಿಯತೊಡಗುವರು. ಕಿಟ್ಟು, ಕೂಸು ಗಾಡಿಯೊಳಗೆ ಕುಳಿತು ಚಪ್ಪಾಳೆ ತಟ್ಟುತ್ತಿರುವರು. ಲಚುಮಿ ಲಚುಮನ ಸಹಾಯಕ್ಕೆ ಹೋಗಿ ಬೊಂಬೆಯನ್ನು ಸರಿಮಾಡುವಳು.)

ಲಚುಮ—ಲಚುಮಿ, ನಿನ್ನ ಬುದ್ಧೀಗೆ ಏನುಕೊಟ್ಟರೂ ತೀರದು ಕಣೆ.

ಲಚುಮಿ—ಬಿಡು ಬಿಡು ಏನಂಥ ಬುದ್ಧಿ ನಂದು, ನೀನೇ ಎಲ್ಲಾ ಸರಿಮಾಡಿದ್ದು.

ಲಚುಮ—ಲಚುಮಿ, ನೀನು ಬಹಳ ಬುದ್ಧಿವಂತೆ ಇದ್ದಿ........

ಲಚುಮಿ—(ಅವನ ಮಾತನ್ನು ಅಲ್ಲಿಗೆ ತಡೆದು) ಅಲ್ಲಾ, ನೀನು ಮಕ್ಕಳನ್ನೆಲ್ಲಾ ಕರೆದುಕೊಂಡು ನಮ್ಮ ಮನೆ ಮೇಲೆ ಬರುತೀನಿ ಅಂದೆ. ಚೆನ್ನಾಗಿ ಬಂದೆ. ನಾನೆಷ್ಟುಹೊತ್ತು ಕಾದಿದ್ದೆ ಅಂತೀ!

ಲಚುಮ—ರಾಯರೂ ಅಮ್ಮಾವರೂ ಮಕ್ಕಳನ್ನು ಕಳುಹಿಸಿಕೊಡಲು ಹೊತ್ತುಮಾಡಿದರು. ನನ್ನ ಮನಸ್ಸು ನೀನು ಕಾದಿದ್ದೀಯಾ ಅಂತಲೇ ಇತ್ತು. ಅದಕ್ಕೇ ಇಲ್ಲಿಗೆ ಬೇಗ ಬಂದೆ.

ಲಚುಮಿ—ಚೆನ್ನಾಯ್ತು ಅಲ್ಲಿ ಕಾದಿರು ಎಂದು ಹೇಳಿ ಇಲ್ಲಿಗೆ ಬಂದುಬಿಟ್ಟೆಯಾ. ನಿನಗೆ ಅಲ್ಲಿ ಕಾದಿದ್ದರೆ ಅಲ್ಲೇ ಕಾದಿರೋದುತಾನೆ.

ಶಾಂತು—(ಕುಂಟುತ್ತಾ ಬಂದು ಲಚುಮನ ಕೈ ಹಿಡಿದುಕೊಂಡು) ಲಚುಮಾ ಕತೆ ಹೇಳೋ. ನಿನ್ನೆ ಹೇಳ್ತೀನಿ ಅಂತ ಹೇಳಿದ್ದೆಯಲ್ಲೋ.

ಲಚುಮ—ಯಾವ ಕತೆ ಹೇಳಲಿ.

ಶಾಂತು—ಆ........ರಾಕ್ಷಸನ ಕತೆ

ಲಚುಮ—ಆ ಕತೇನ ಎಷ್ಟೊಂದುಸಲ ಹೇಳಿದ್ದೇನೆ. ಬೇರೆ ಕತೆ ಹೇಳುತೀನಿ.

ಶಾಂತು—ಇಲ್ಲ ಅದನ್ನೇ ಹೇಳಬೇಕು.

ಎಲ್ಲರೂ—ಅದನ್ನೇ ಹೇಳಬೇಕು.

ಲಚುಮ—ಆಗಲಿ ಕುಳಿತುಕೊಳ್ಳಿ. ಲಚುಮಿ, ಇವರನ್ನೆಲ್ಲಾ ಸರಿಯಾಗಿ ಕೂಡಿಸು.

(ಎಲ್ಲರೂ ಕುಳಿತುಕೊಳ್ಳುವರು. ಲಚುಮ, ಕಿಟ್ಟುನೂ ಕೂಸನ್ನೂ ಗಾಡಿಯಿಂದ ಇಳಿಸಿಕೊಂಡುಬರಲು ಹೋಗುವನು. ಲಚುಮಿ ಮಕ್ಕಳಿಗೆ ಹೇಳಿಕೊಡುತ್ತಾ ತಾನು ಹಾಡುವುದಕ್ಕೆ ಮೊದಲುಮಾಡುವಳು.)

ಲಚುಮಿ— ಕತೆಯನ್ನು ಹೇಳುತಾನೆ
ಲಚುಮಯ್ಯನು, ನಮಗೆ
ಕತೆಯನ್ನು ಹೇಳುತಾನೆ
ಲಚುಮಯ್ಯನು.

ಮಕ್ಕಳು—ಕತೆಯನ್ನು ಹೇಳುತಾನೆ ಲಚುಮಯ್ಯನು.

ಲಚುಮಿ— ಏಳು ಸುತ್ತಿನ ಕೋಟೆ
ಮೇಲೆ ಚಿನ್ನದ ಕಳಸ
ಹಾಳು ರಾಕ್ಷಸನಲ್ಲಿ
ಆಳುತ್ತಲಿರುವಾ
ಕತೆಯನ್ನು ಹೇಳುತಾನೆ
ಲಚುಮಯ್ಯನು.
ಮಕ್ಕಳು—ಕತೆಯನ್ನು ಹೇಳುತಾನೆ ಲಚುಮಯ್ಯನು.
ಲಚುಮಿ— ರಾಜರೆಲ್ಲರ ಗೆದ್ದು
ರಾಜಕುವರಿಯ ಕದ್ದು
ರಕ್ಕಸನದರಲ್ಲಿ
ಸೆರೆಯಿಟ್ಟು ಇರುವಾ
ಕತೆಯನ್ನು ಹೇಳುತಾನೆ
ಲಚುಮಯ್ಯನು.
ಮಕ್ಕಳು—ಕತೆಯನ್ನು ಹೇಳುತಾನೆ ಲಚುಮಯ್ಯನು.
ಲಚುಮಿ— ರಾಜಕನ್ನಿಕೆಯನ್ನು
ಬಿಡಿಸಬೇಕೆಂದು ಬಂದ
ರಾಜಪುತ್ರರೆಲ್ಲರನ್ನು
ಹೊಡೆದಟ್ಟುತಿರುವಾ
ಕತೆಯನ್ನು ಹೇಳುತಾನೆ
ಲಚುಮಯ್ಯನು.
ಮಕ್ಕಳು—ಕತೆಯನ್ನು ಹೇಳುತಾನೆ ಲಚುಮಯ್ಯನು.
ಲಚುಮಿ— ಬಂದ ಒಬ್ಬನು ಶೂರ
ಕೊಂದ ರಾಕ್ಷಸನನ್ನ
ಬಂಧನವ ಬಿಡಿಸಿ ಅವಳ
ಮದುವೆಯನ್ನು ಮಾಡಿಕೊಂಡ
ಕತೆಯನ್ನು ಹೇಳುತಾನೆ
ಲಚುಮಯ್ಯನು.

ಮಕ್ಕಳು—ಕತೆಯನ್ನು ಹೇಳುತಾನೆ ಲಚುಮಯ್ಯನು.

ಲಚುಮ—ಲಚುಮಿ, ಎಲ್ಲೀದೆ ಈ ಹಾಡು? ಎಲ್ಲಿ ಕಲಿತೆ?

ಲಚುಮಿ—ಯಾಕೆ ಇದು ಚೆನ್ನಾಗಿಲ್ವಾ.

ಲಚುಮ—ಲಚುಮಿ, ಆವಾಗಲೇ ನಾನು ಹೇಳಲಿಲ್ವೇ ನೀನು ಬುದ್ಧಿವಂತೆ ಅಂತ. ಅಲ್ವೇನು. ಈಗ ಒಪ್ಪಿಕೋತೀಯೋ ಇಲ್ವೋ.

(ಕಿಟ್ಟೂನೂ ಕೂಸನ್ನೂ ಕೆಳಗಿರಿಸಿ ಲಚುಮಿಯ ಬಳಿಗೆ ಹೋಗುವನು.)

ಲಚುಮಿ—ಎಲ್ಲಿ ಇನ್ನು ಕತೆಯನ್ನು ನೀನು ಹೇಳು, ಮಕ್ಕಳಿಗೆ.

ಲಚುಮ—ಕತೆಯನ್ನೆಲ್ಲಾ ನೀನೇ ಹೇಳಿ ಮುಗಿಸಿದ್ದೀಯಲ್ಲಾ. ನಾನು ಹೇಳೋದಿನ್ನೇನಿದೆ.

ಲಚುಮಿ—ನಾನು ಹೇಳೋದಕ್ಕೂ ನೀನು ಹೇಳೋದಕ್ಕೂ ವ್ಯತ್ಯಾಸ ಇಲ್ವಾ ನೀನು ಚೆನ್ನಾಗಿ ಹೇಳ್ತಿ, ಮಕ್ಕಳನ್ನು ಕೇಳು.

ಮಕ್ಕಳು—ಲಚುವಾ, ನೀನು ಈ ಕತೇನೇ ಹೇಳೋ. ಕೇಳೋದಕ್ಕೆ ನಮಗೆ ಆಸೆ.

ಲಚುಮ—ಕತೆ ಹೇಳೋದು ಇನ್ನು ಬೇಡ. ಇವತ್ತು ಈ ಕತೇನ ಇಲ್ಲಿ ಆಡೋಣ. ಅಂ?

ಮಕ್ಕಳು—ಊಂ. ಆಡೋಣ.

ಲಚುಮ—(ಎರಡು ಪೆರಾಂಬ್ಯುಲೇಟರನ್ನು ಒಟ್ಟು ಗೂಡಿಸಿಟ್ಟು) ಇಗೋ ಈ ಗಾಡಿಗಳು ಕೋಟೆ. ರಾಕ್ಷಸನ ಅರಮನೆ ಇದು. ಇದರಲ್ಲೆ ರಾಜ ಕನ್ನಿಕೇನ ಬಂಧಿಸಿಟ್ಟಿರೋದು.

ಸಾತು—ರಾಜಕನ್ನಿಕೆ ಯಾವದು?

ಲಚುಮ—ಸಾತಮ್ಮನೋರ ಮಗು! (ಬೊಂಬೆಯನ್ನು ಕೈಯಲ್ಲಿ ಹಿಡಿದು ತೋರಿಸಿ) ಇದು.

ಸಾತು—ಸರಿ ಹಾಗಾದರೆ ನಾನು ಇದಕ್ಕೆ ಸೀರೆ ಉಡಿಸಿಕೊಡುತ್ತೇನೆ.

ಲಚುಮಿ—ರಾಕ್ಷಸ ಯಾರು ಹಾಗಾದರೆ?

ಲಚುಮ—ಹಾಗಾದರೆ ರಾಕ್ಷಸ ಯಾರು ಆಗಲಿ ಹೇಳು.

ಲಚುಮಿ—ನೀನು.

ಮಕ್ಕಳು—ಹಾಗಾದರೆ ನಾವು? ನಾವು?

ಲಚುಮ—ನೀವುಗಳೆಲ್ಲಾ ರಾಜಕುಮಾರರು. ರಾಜಕನ್ನಿಕೇನ ಬಿಡಿ ಸೋದಕ್ಕೆ ಬರುತೀರಿ. ಬಂದು ನನ್ನೊಡನೆ ಅಲ್ಲಾ ರಾಕ್ಷಸನೊಡನೆ ಯುದ್ಧಮಾಡಿ ಸೋತು ಸೆರೆಯಾಳುಗಳಾಗಿಬಿಡುತೀರಿ.

ನಾಣಿ—ನಾವಾಯಿತು. ಸರಿ. ಇನ್ನು ಲಚುಮಿ?

ಲಚುಮ—ರಾಕ್ಷಸನನ್ನ ಗೆದ್ದ ರಾಜಕುಮಾರ.

ಮಕ್ಕಳೆಲ್ಲಾ—ಓ ಲಚುಮಿ ಗಂಡಸು!

ಲಚುಮ—ಇನ್ನು ಆಟ ಮೊದಲುಮಾಡೋಣ.

ಲಚುಮಿ—ತಾಳು ರಾಕ್ಷಸನಿಗೆ ನಾನು ಅಲಂಕಾರಮಾಡುತೇನೆ.

(ಲಚುಮಿ ಪೆರಾಂಬ್ಯುಲೇಟರಿನಲ್ಲಿದ್ದ ಮಕ್ಕಳ ಹೊದಿಕೆ ಬಟ್ಟೆಗಳನ್ನು ಲಚುಮನ ಸೊಂಟಕ್ಕೆ ತಲೆಗೆ ಎಲ್ಲಾ ಸುತ್ತಿ ಯಕ್ಷಗಾನದ ರಾಕ್ಷಸನನ್ನಾಗಿ ಮಾಡುವಳು. ಲಚುಮನೂ ತನ್ನ ತಲೆ ಕೆದರಿಕೊಂಡು, ತಲೆಕೂದಲನ್ನೇ ಮೀಸೆ ಗಡ್ಡ ಮಾಡಿಕೊಂಡು ಸಿದ್ಧನಾಗುವನು. ಸಾತು ಬೊಂಬೆಗೆ ಸೀರೆ ಉಡಿಸಿ ಪೆರಾಂಬ್ಯುಲೇಟರಮೇಲೆ ಇಡುವಳು.)

ಲಚುಮಿ—ಇನ್ನು ನಾಟಕ ಷುರುವಾಗಲಿ. (ಎಲ್ಲರೂ ಒಂದುಕಡೆಗೆ ನಿಲ್ಲುವರು)

ಲಚುಮ—ಮೊದಲು ನಾನು ಗಣಪತಿ ಪ್ರಾರ್ಥನೆ ಮಾಡಿಬಿಡುತೇನೆ.

ಶಾಂತು—(ಕುಂಟುತ್ತಾ ಬಂದು) ಗಣೇಶನ ಪ್ರಾರ್ಥನೆ ನಾನು ಮಾಡುಶೀನಿ.

(ನಿಂತು ತನ್ನ ತಾಯಿ ಹೇಳಿಕೊಟ್ಟಿದ್ದ ಪದ್ಯ ಹೇಳುವಳು.)

ಗಜವದನ ಹೇರಂಬ ಗಣಪತಿ
ಭುಜಗ ಭೂಷಣ ವಿಘ್ನಮದಸಾ
ಮಜಕೆ ಪಂಚಾನನ ಮಹೇಶ್ವರ ಪುತ್ರ ಶುಭಗಾತ್ರ....

ಲಚುಮಿ—ಶಾಂತಮ್ಮನೋರೆ ಬಂದುಬಿಡಿ ಇನ್ನು, ಈ ಕಡೆಗೆ.

(ಲಚುಮ ರಾಕ್ಷಸನ ವೇಷದಲ್ಲಿ ಪ್ರವೇಶಿಸಿ ಒಂದೆರಡುಸಲ ಗರ್ಜನೆಮಾಡಿ ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ನೆಗೆದು ಹಾಡಲು ಆರಂಭಿಸುವನು.)

ಲಚುಮಿ—ಲಚುಮ ಎಷ್ಟಾದರೂ ಊರಲ್ಲಿ ಬಯಲಾಟ ಆಡಿದ್ದೋನು!

ಜಯು ಶಾಂತು—ಲಚುಮ ಎನ್ನಬೇಡ, ರಾಕ್ಷಸ ಅವನು!

ಲಚುಮ— ಧಿತ್ತೊಂಗ, ಜಣತೋಂಗ
ಧಿಕ್‌ಭಲಾರೇ ಜಣಭಲಾರೇ

ನೂರಾರು ಅರಸಾರ
ಸೊಕ್ಕನ್ನು ಮುರಿದೇನು
ನೂರೆಂಟು ಕೋಟೆಗಳ
ಗೆದ್ದು ನಾ ಬಂದೇನು

ಮುತ್ತು ಮಾಣಿಕ್ಯವ
ಧನ ಧಾನ್ಯ ತಂದೇನು
ವಜ್ರ ವೈಡೂರ್ಯದ
ಒಡವೆಗಳ ತುಂಬೇನು

(ಕೋಟೆಯ ಹಿಂದುಗಡೆಯಿಂದ ಧ್ವನಿ ಬರುವುದು. ಆಲಿಸುವನು. ಲಚುಮಿ ಪೆರಾಂಬ್ಯುಲೇಟರ ಹಿಂದೆ ನಿಂತು ಹಾಡುವಳು.)

ಲಚುಮಿ— ಅಣ್ಣದಿರೇ, ಓ
ಅಣ್ಣದಿರೇ,
ಬಂಧನವ ಬಿಡಿಸಿ, ಬನ್ನಿ
ಓ ಎನ್ನ ಬಿಡಿಸಿ ಬನ್ನಿ.

ರಕ್ಕಸನು ಮದುವೆಯಾಗು
ಎಂದೆನ್ನ ಕಾಡುತಿಹನು,
ಏಕಾಂಗಿಯಾಗಿ ಎನ್ನ
ಕೋಟೆಯಲಿ ಬಂಧಿಸಿಹನು.

ಹಡೆದ ಓ, ತಾಯಿ ತಂದೆ,
ಸಗ್ಗದಿಂದಿಳಿದು ಬನ್ನಿ,
ಹೇ ದೇವ, ಮಾರಮಣನೇ,
ಗರುಡನನು ಏರಿ ಬಾರೋ

ಲಚುಮ— ಹೇ, ರಾಜಕುವರಿ,
ತವಕಿಸುವುದೇಕೆ?
ಹೇ ಎನ್ನ ಮಡದಿ,
ನಿನಗೇಕೆ ಚಿಂತೆ.
ಧನವಿಹುದು ಧಾನ್ಯ;
ಕೋಟಿಯೇ ಮಾನ್ಯ.
ಶೂರಾಧಿ ಶೂರ
ನಾ ನಿನ್ನ ಪೋರ.
(ಕುಣಿಯುತ್ತಾ)
ಇಂದ್ರ ಬರಲಿ ವರುಣ ಬರಲಿ
ಮರುತ ಬರಲಿ ಯಮನೆ ಬರಲಿ
ಅಂಜುವವನೆ ನಾನು
ಓ—ನಾನು
ಈ—ನಾನು.

(ಅಷ್ಟರಲ್ಲಿ ಲಚುಮಿ ಹೋಗಿ ಆ ಮಕ್ಕಳನ್ನು "ನೀವೆಲ್ಲಾ ರಾಜಕುಮಾರಿಯ ಅಣ್ಣತಮ್ಮಂದಿರು. ಅವನ ಮೇಲೆ ಧಾಳಿ ಹೋಗಿ" ಎಂದು ಕಳುಹಿಸಿಕೊಡುವಳು. ಅವರು ಪಕ್ಕದಿಂದ ಒಬ್ಬರ ಹಿಂದೆ ಒಬ್ಬರು ದಿಮಿದಿಮಿ ದಿಮಿಕಿಟತಾ ಎಂದು ಬರುವರು. ಬಂದು ಲಚುಮನನ್ನು ಮುತ್ತುವರು. ಲಚುಮ ಅವರೊಡನೆ ಹೋರಾಡುತ್ತಿರುವನು.)

ಲಚುಮ— ಎಳೆ ಕುವರರೇ,
ನೀವೇತಕೆ
ಸಾವ ಬಯಸಿ
ಬಂದಿರೀ!

ಸಾತು— ನಿನ್ನ ಸಾವ
ಬಯಸಿ ನಾವು
ಇಲ್ಲಿಗೈತಂದೆವು;

ಎಲ್ಲರೂ— ಸೋದರಿಯಾ
ಸೆರೆಯ ಬಿಡಿಸಿ
ಕರೆದುಕೊಂಡೊಯ್ವೆವು.

(ಹುಡುಗರೆಲ್ಲಾ ಲಚುಮನ ಮೇಲೆ ಬೀಳುವರು. ಲಚುಮ ಹೋರಾಡಿ ಫಲವಿಲ್ಲೆಂದು ಎಲ್ಲರನ್ನೂ, ಮಂತ್ರಿಸಿ, ಮೂಕಪ್ರಾಣಿಗಳನ್ನಾಗಿ ಮಾಡಿಬಿಡುವನು.)

ಲಚುಮ—(ಗಂಭೀರವಾಗಿ)

ಹ್ರಾಂ ಹ್ರೀಂ ಹ್ರೋಂಹ್ರೋಂ
ನಶ್ವರ ಗಶ್ವರ ಪಶ್ವರ ಈಶ್ವರ

(ಮೇಲಕ್ಕೆ ಕೈ ಮುಗಿದು ಹುಡುಗರ ತಲೆಯಮೇಲೆ ಕೈಚಾಚಿ ಧ್ಯಾನ ಮಾಡುತ್ತಿದ್ದು ಸಾತುವಿನ ಕಡೆಗೆ ಕೈನೀಡಿ)

ನೀನು ಆನೆಯಾಗು

(ಸಾತು ಆನೆಯಂತೆ ನಿಲ್ಲುವಳು, ತನ್ನ ಜಡೆಯನ್ನು ಮುಂದಕ್ಕೆ ಚಾಚಿ ಅದನ್ನೇ ಸೊಂಡಿಲನ್ನಾಗಿ ಮಾಡಿಕೊಳ್ಳುವಳು.)

(ಪದ್ದೂನ ತೋರಿಸಿ)
ನೀನು ಕುದುರೆಯಾಗು.
(ಪದ್ದು ಕುದುರೆಯಂತೆ ನಟಿಸುವಳು)
(ನಾಣೀನ ತೋರಿಸಿ)
ನೀನು ಕೋತಿಯಾಗು.
(ಅವನು ಕೋತಿಯಂತೆ ನಟಿಸುವನು)

(ನಾಣಿ ಕೋತಿಯಹಾಗೆ ಆಡುತ್ತಿರುವುದನ್ನು ಕಂಡು ಇತರರಿಗೆ ನಗು ಬರುವುದು. ಲಚುಮಿ ನಗಬೇಡಿರೆಂದು ಸಂಜ್ಞೆ ಮಾಡುವಳು. ಲಚುಮ ಜಯು ಶಾಂತುವನ್ನೂ ಒಂದೊಂದು ಪ್ರಾಣಿಗಳಾಗುವಂತೆ ಹೇಳುವನು. ಅವರೂ ಹಾಗೆ ಅಭಿನಯಿಸುವರು. ಲಚುಮ ಅವರನ್ನು ಹಾಗೇ ಆಡಿಸುತ್ತಿರುವನು. ಲಚುಮಿ ಕೋಟೆಯ ಹಿಂದೆ ಹೋಗಿ ರಾಜಪುತ್ರಿ ಪ್ರಲಾಪಿಸುತ್ತಿರುವಂತೆ ಹಾಡುವಳು.)

ಲಚುಮಿ— ಅಯ್ಯೋ! ಏನಾಯ್ತು ಮೋಸ!
ಅಣ್ಣದಿರ ಕರೆದೆ
ನನ್ನ ಕಷ್ಟಕೆ ಕರೆದೆ
ಅಯ್ಯೋ! ಏನಾಯ್ತು ಮೋಸ!
ಹಾಳು ರಾಕ್ಷಸನವನು
ಮಾಟ ಮಾಡಿದನೇ
ಮಾಡಿದನೆ ಅವರ
ಮೂಕಜಂತುಗಳ
ಅಯ್ಯೋ! ಏನಾಯ್ತು ಮೋಸ!
ಹೇ ನನ್ನ ಪ್ರೀತಿಯ ಮೂರ್ತಿ,
ಹೇ ರಾಜಕುವರ, ಬಾರ, ಬಾರ.

ಲಚುಮ—(ಹುಡುಗರನ್ನು ಕುಣಿಸುವನು)

ಹತ್ತಾ ದಿಂದಾ
ದಿಕಿ ತಕ ತಾ
ದಿಕಿ ತಕ ತೈ
ತಾ........ತೈ
ತಾ........ತೈ.

(ದೂರದಲ್ಲಿ ಸದ್ದಾಗುವುದು. ಲಚುಮಿ ರಾಜಕುಮಾರನ ವೇಷ ಧರಿಸಿ ಬರುವಳು.)

ಮಕ್ಕಳು— ಬಂದನದೋ
ಬಂಧನದೋ
ಕರುನಾಡ
ರಾಜಕುವರ
ರಾಜಕುವರ
ರಾಜಕುವರ
(ಕುಣಿಯುವರು)

ಲಚುಮ— ಬಾರೊ ಬಾರೊ ಬಾರೊ ಬಾರೊ
ರಾಜಪುತ್ರನೇ
ತೋರೊ ತೋರೊ ತೋರೊ ತೋರೊ
ನಿನ್ನ ಮೊಗವನೇ

ಲಚುಮಿ— ಬಂದೆ ಬಂದೆ ಬಂದೆ ಬಂದೆ
ನಿಲ್ಲೊ ಖೂಳನೆ
ಒಂದೆ ಪೆಟ್ಟನಿಂದ ನಿನ್ನ
ಕೊಂದುಹಾಕುವೆ.

(ಇಬ್ಬರು ಕೈಕೈ ಮಿಲಾಯಿಸಿ ಕುಸ್ತಿ ಮಾಡುವರು.)

ಲಚುಮ—ಹೊಡೆವೆನೂ

ಲಚುಮಿ—ಕಡಿವೆನೂ

(ಮಕ್ಕಳು ಲಚುಮನ ಬೆನ್ನಮೇಲೆ ಬೀಳುವರು. ಲಚುಮ ಕೆಳಕ್ಕೆ ಬೀಳುವನು. ಲಚುಮಿ ಅವನ ಎದೆಯ ಮೇಲೆ ಕುಳಿತುಕೊಳ್ಳಲು ಹೋಗುವಳು. ಕಠಾರಿಯ ನೆನಪು ಬರಲು ಎದ್ದುಹೋಗಿ ಪೆರಾಂಬ್ಯುಲೇಟರಿನಲ್ಲಿದ್ದ ಗಿಲಿಕೆಯನ್ನು ತೆಗೆದುತಂದು

ಕಠಾರಿಯ ಹಾಗೆ ಹಿಡಿದು ನಿಲ್ಲುವಳು. ಅಷ್ಟರಲ್ಲಿ ಅಲ್ಲಿಗೆ ಶ್ರೀನಿವಾಸರಾಯರೂ ಅವರ ಕುಟುಂಬ ದಯಮಾಡಿಸುವರು. ಮಕ್ಕಳು "ಅಮ್ಮ ಬಂದಳು, ಅಪ್ಪ ಬಂದರು" ಎಂದು ಅವರಕಡೆಗೆ ಓಡುವರು.)

ಶ್ರೀನಿವಾಸರಾಯ—ಏ ಲಚುಮಾ, ಏನೋ ಅದು.

(ಲಚುಮಿ ಕಕ್ಕಾಬಿಕ್ಕಿಯಾಗಿ ಎದ್ದು ನಿಲ್ಲುವಳು.)

ಲಚುಮ—(ಎದ್ದು ನಿಂತು) ಮಕ್ಕಳನ್ನೆಲ್ಲಾ ಆಡಿಸುತ್ತಿದ್ದೆವು.

ಶ್ರೀನಿವಾಸರಾಯ—ನಿನ್ನ ಆಟ ಹಾಳಾಯಿತು, ಕಿಟ್ಟು ಎಲ್ಲಿ?

('ಕಿಟ್ಟೂ, ಕಿಟ್ಟೂ' ಎಂದು ಎಲ್ಲರೂ ಕೂಗಾಡುವರು. ಪರದೆಯ ಹಿಂದೆ ಕೂಗಾಟ ಕೇಳುವುದು "ಕೆರೆಯೊಳಕ್ಕೆ ಈ ಮಗು ಬಿದ್ದು ಹೋಗುತ್ತಿತ್ತು. ಯಾರದು ಈ ಮಗು?" ಎಂದು. ಎಲ್ಲರೂ ಆಕಡೆಗೆ ಹೋಗುವರು.)

ಲಚುಮಿ—ಈಗೇನು ಮಾಡ್ತಿ ರಾಯರು ಕೋಪಿಸಿಕೊಂಡಹಾಗಿದೆ ಏನುಮಾಡುತಾರೋ.

ಲಚುಮ—ಏನುಮಾಡೋದಕ್ಕೆ ಆಗ್ತದೆ. ದೇವರ ಇಚ್ಛೆ ಇದ್ದ ಹಂಗೆ ಆಗಲಿ.

(ಗಾಡಿಗಳನ್ನು ನೂಕಿಕೊಂಡು ಹೋಗುವರು. ಪರದೆ ಬೀಳುವುದು.)

## ಎರಡನೆಯ ದೃಶ್ಯ

[ಲಚುಮ ಶ್ರೀನಿವಾಸರಾಯರ ಮನೆಯ ಕೆಲಸ ಕಳೆದುಕೊಂಡು ಹತ್ತು ದಿನಗಳಾಗಿವೆ. ಇನ್ನೂ ಎಲ್ಲಿಯೂ ಕೆಲಸ ಸಿಕ್ಕಿಲ್ಲ. ಲಚುಮಿ ಸರಸ್ವತಮ್ಮನವರ ಮನೆಯ ಕೆಲಸವನ್ನು ನೋಡಿಕೊಂಡು ಪಕ್ಕದ ಐಯರ್ ಮನೆಯಲ್ಲಿ ಮುಸುರೆ ತೊಳೆಯುವ ಕೆಲಸವನ್ನೂ ಮಾಡುತ್ತಾ ಅಲ್ಲಿ ಕೊಟ್ಟ ಅನ್ನ ಸಾರು ತಂದು ಲಚುಮನಿಗೆ ಕೊಡುತ್ತಿದ್ದಾಳೆ. ಸಂಜೆಯಲ್ಲಿ ಮಕ್ಕಳನ್ನು ನೋಡುವುದಕ್ಕೋಸ್ಕರ ಲಚುಮ ಪಾರ್ಕಿಗೆ ಬಂದುಹೋಗುತ್ತಿದ್ದಾನೆ. ಲಚುಮಿ ಶ್ರೀನಿವಾಸರಾಯರ ಮನೆ ಮಕ್ಕಳನ್ನೂ ಅಲ್ಲಿಗೆ ಕರೆದುಕೊಂಡು ಬರುತ್ತಿದ್ದಾಳೆ. ಪರದೆ ಮೇಲಕ್ಕೆ ಹೋದಾಗ ಲಚುಮ ಪಾರ್ಕಿನ ಕಲ್ಲುಬೆಂಚಿನ ಮೇಲೆ ಕುಳಿತು ಬಿದುರಿನ ಕೋಲುಗಳನ್ನು ಹುಯ್ಯಲು ಅನುಕೂಲವಾಗುವಂತೆ ಮಾಡುತ್ತಿರುವುದು ಕಾಣುವುದು.]

ಲಚುಮ—ಸ್ನೇಹ ಸಂಪಾದಿಸಬೇಕಣ್ಣಾ | ಜಗದಾ
ಪ್ರೇಮವ ಗಳಿಸಲು ಬೇಕಣ್ಣ

ಸ್ನೇಹಕ್ಕೂ ಹೆಚ್ಚಿನದು ಯಾವುದು ಇಲ್ಲಣ್ಣ,
ಪ್ರೇಮದಿಂದೆಲ್ಲರ ಗೆಲ್ಲಲುಬಹುದಣ್ಣ
ಸ್ನೇಹವಿರುವೆಡೆ ಪ್ರೇಮ ; ಪ್ರೇಮವಿರುವೆಡೆ ಶಾಂತಿ
ಶಾಂತಿ ನೆಲಸಲು ಸತ್ಯ ; ಬಾಳು ಬೆಳಕಣ್ಣ

(ಲಚುಮಿ ಕೈಯಲ್ಲಿ ಬುತ್ತಿ ಹಿಡಿದುಕೊಂಡು ಪ್ರವೇಶಿಸುವಳು)

ಲಚುಮ—ಲಚುಮಿ, ಬಂದೆಯಾ.

ಲಚುಮಿ—ನೀನು ಹೋಗಿದ್ದ ಕೆಲಸ ಏನಾಯಿತು? ಹಣ್ಣೋ ಕಾಯೋ?

ಲಚುಮ—ಇನ್ನೂ ನಮ್ಮ ಕಷ್ಟ ಹರಿದಂಗೆ ಕಾಣೋದಿಲ್ಲ. ಇದೀಗ ಆರಂಬ ಆಗೈತೆ.

ಲಚುಮಿ—ಬೆಳಗಿನಿಂದ ಉಪವಾಸವೋ, ಹೊಟ್ಟೆಗೆ ಏನಾದರೂ ಹಾಕಿಕೊಂಡೆಯೋ?

ಲಚುಮ—(ಅವಳ ಪ್ರಶ್ನೆಗೆ ಉತ್ತರ ಹೇಳದೆ) ಇವತ್ತು ಮಕ್ಕಳಿಗೆ ಕೋಲಾಟದ ಪದ ಹೇಳಿಕೊಡುತೀನಿ ಎಂದಿದ್ದೆ. ಅದಕ್ಕೆ ಕೋಲುಗಳನ್ನು ಅಣಿ ಮಾಡುತ್ತಿದ್ದೇನೆ. ಮಕ್ಕಳೆಲ್ಲಿ?

ಲಚುಮಿ—ಈಗ ಹೋಗಿ ಕರೆದುಕೊಂಡು ಬರುತೀನಿ.

ಲಚುಮ—ನಮ್ಮ ಮನೆ ಮಕ್ಕಳನ್ನೂ ?

ಲಚುಮಿ—ಅವರೂ ಬರುತಾರೆ. ಹೊಸ ಆಳು ಬರೋವರೆಗೆ ನಾನೇ ಅವರನ್ನೂ ನಮ್ಮ ಮನೆ ಮಕ್ಕಳೊಡನೆ ಕರೆದುಕೊಂಡು ಹೋಗೋದಕ್ಕೆ ಹೇಳಿದಾರೆ.

ಲಚುಮ—ಲಚುಮಿ, ಹೊಸಬ ಯಾವಾಗ ಬರುತಾನಂತೆ ?

ಲಚುಮಿ—ನಂಗೊತ್ತಿಲ್ಲ.

ಲಚುಮ—ಮನೆ ಮುಂದೆ ನಾನು ಹಾಕಿದ್ದ ಗಿಡಗಳು ಏನಾಗಿವೆ ? ನೀರು ಹಾಕುತಾರೋ ಇಲ್ಲವೋ! ರಾಯರು ಮನೆಯಲ್ಲಿ ಇಲ್ಲದ ಹೊತ್ತಿನಲ್ಲಿ ನೀರನ್ನು ನಾನೇ ಯಾಕೆ ಎರೆದುಬರಬಾರದು ಅಂತೀನಿ.

ಲಚುಮಿ—ನಿನ್ನೆ ಸಾತಮ್ಮನೋರು ಲಚುಮ ಹಾಕಿದ ಗಿಡ ಇವು ಎಂದು ತಂಬಿಗೆಯಲ್ಲಿ ನೀರು ತಂದು ಹಾಕುತ್ತಿದ್ದರು. ನನಗೆ ಅದನ್ನು ನೋಡಿ ಮನಸ್ಸಿಗೆ ಹೇಗೋ ಆಯಿತು. ನಾನೇ ಹೋಗಿ ನೀರೆರೆದು ಬಂದೆ.

ಲಚುಮ—ರಾಯರ ಹಿರೀಮಗಳು ಚಿಕ್ಕಮ್ಮನೋರನ್ನ—ಅದೇ ನಮ್ಮ ಕಿಟ್ಟಣ್ಣೋರ ತಾಯಿ—ಅವರನ್ನ ಆಸ್ಪತ್ರೇಲಿ ಬಿಟ್ಟಿದ್ದರು, ಹೇಗಿದ್ದಾರಂತೆ? ನಾನೂ ಆಸ್ಪತ್ರೆಗೆ ಈ ನಾಲ್ಕು ದಿನಗಳಿಂದಲೂ ಹೋಗಲಿಲ್ಲ.

ಲಚುಮಿ—ಎಲ್ಲಾ ಸೌಖ್ಯವಾಗಿದಾರೆ.

ಲಚುಮ—ರಾಯರ ಬಟ್ಟೆಗಳನ್ನ ಅಗಸರ ರಾಯಪ್ಪನಿಗೆ ಒಗೆಯೋದಕ್ಕೆ ಕೊಟ್ಟಿದ್ದೆ. ಅವನ ಹತ್ತಿರ ನಾಲ್ಕುಸಲ ತಿರುಗಿದರೇ ಅವನು ಬಟ್ಟೆ ಕೊಡೋದು. ಏನು ತಂದುಕೊಟ್ಟನೋ ಬಿಟ್ಟನೋ ?

ಲಚುಮಿ—ಸಾಕುಮಾಡಿನ್ನು ನಿನ್ನ ಪ್ರಲಾಪ. ಈ ಬುತ್ತೀನ ಇಲ್ಲೇ ತಿನ್ನುತಿರು, ನಾನು ಹೋಗಿ ಮಕ್ಕಳನ್ನು ಕರತರುತೇನೆ.

ಲಚುಮ—ನಿನಗೆ ನಾನೆಷ್ಟು ಕಷ್ಟ ಕೊಡುತ್ತಿದ್ದೇನೆ! ಎಲ್ಲೀ ಸಂಬಂಧ ನಮ್ಮದು ?

(ಲಚುಮಿಯ ಕಣ್ಣಲ್ಲಿ ನೀರು ಬರುವುದು. ಒರಸಿಕೊಳ್ಳುತ್ತಾ ಹೊರಟುಹೋಗುವಳು)

ಲಚುಮ—(ಬುತ್ತಿಯ ಗಂಟನ್ನು ಬಿಚ್ಚಿ ಅನ್ನವನ್ನು ತಿನ್ನುತ್ತಾ ನಡುವೆ ತನ್ನೊಳಗೆ ತಾನೇ ಹಾಡಿಕೊಳ್ಳುವನು.)

ಯಾವ ದೇಶದ ಹೆಣ್ಣೊ
ಯಾವ ಕುಲದವಳೋ
ಎಲ್ಲಿ ಬೆಳೆದೆಯೊ ನೀನು
ಎಂದು ಸೇರಿದೆವೋ—
ಹೇಗೆ ಸೇರಿದೆವೋ
ಮನಸು ಮನಸೂ ಬೆರತು
ಒಂದೆ ಹುರಿಯಾಯ್ತು
ನನ್ನ ಕಷ್ಟವ ನೀನು
ಹೊರುವ ತೆರನಾಯ್ತು—
ಹೊರುವಂತೆ ಆಯ್ತು.

(ಅವನು ತಿನ್ನುತ್ತಾ ಕುಳಿತಿದ್ದೆಡೆ ಒಂದು ಬಡಕಲ ನಾಯಿ ಬರುವುದು. ಅವನ ಬುತ್ತಿಗೆ ಬಾಯಿಹಾಕುವುದಕ್ಕೆ ಹೋಗುವುದು. ಅವನು ಅದನ್ನು ಹೊಡೆಯಲು ಕೈಯೆತ್ತುವನು. ಅದು ಓಡಿಹೋಗದೆ ಬಾಲವನ್ನಲ್ಲಾಡಿಸುತ್ತಾ ಅವನ ಮುಖವನ್ನೇ ನೋಡುತ್ತಾ ನಿಲ್ಲುವುದು.)

ಹೇ ನಾಯಿ,
ಬಡ ಪ್ರಾಣಿ,
ಯಾರಿಹರು ನಿನ್ನವರು—
ಯಾರು ಸ್ನೇಹಿತರು?
ಬಾ, ಬಾರ,
ಬಾರೈಯ್ಯ,
ನಾನು ನಿನ್ನವನು—
ನಾನು ಸ್ನೇಹಿತನು.

(ಆ ಬುತ್ತಿಯನ್ನು ಅದಕ್ಕೇ ಕೊಟ್ಟುಬಿಡುವನು. ಅದು ತಿನ್ನುತ್ತಿದ್ದರೆ ಅದನ್ನೇ ನೋಡುತ್ತಾ ಸಂತೋಷದಿಂದಿರುವನು. ನಾಯಿಯು ಅನ್ನವನ್ನೆಲ್ಲಾ ತಿಂದಮೇಲೆ ಅವನ ಬಳಿ ಕುಳಿತುಕೊಳ್ಳುವುದು. ಅವನು ಅದರ ಮೇಲೆ ಕೈಯಾಡಿಸುತ್ತಾ)

ಲಚುಮಿಯೀವಳು ನನಗೆ
ಅನ್ನ ಆಹಾರ;
ಅದೆ ಆಯ್ತು ಇಬ್ಬರಿಗು
ತಿನ್ನಲಾಧಾರ.
ತಿಂದು ತೇಗುವ ನಾವು
ಲಚುಮಿಯನು ಹರಸಿ;
ಲಚುಮಿಯನು ನಮಗಿತ್ತ
ಸಾಮಿಯನು ಸ್ತುತಿಸಿ.

(ಲಚುಮಿ ಮಕ್ಕಳನ್ನು ಕರೆದುಕೊಂಡು ಬರುವಳು. ಮಕ್ಕಳು ಓಡಿಬಂದು ಲಚುಮನನ್ನು ಮುತ್ತುವರು. ನಾಣಿ ನಾಯಿಯನ್ನು ಹೊಡೆಯಲು ಹೋಗುವನು. ಸಾತು ಅಡ್ಡಬರುವಳು.)

ಸಾತು—ಪಾಪ ಅದನ್ಯಾಕೋ ಹೊಡೀತಿ?

ನಾಣಿ—ನೋಡು ಅದಿರೋದು! ಕಜ್ಜಿಪುರಿಕಿ ಅದು!

ಪದ್ದು—ಅಯ್ಯೋ ಪಾಪ ಅದಕ್ಕೆ ಔಷಧಿ ಹಚ್ಚಬೇಕುಕಣೋ.

ಶಾಂತು—ನನ್ನ ಕಾಲಿಗೆ ಹಚ್ಚುವ ಔಷಧಿ ಇದೆ. ಬೇಕಾದರೆ ನಾನು ಕೊಡುತೇನೆ.

(ಲಚುಮ ಪದ್ದೂನೂ ಶಾಂತೂನೂ ಎತ್ತಿಕೊಂಡು ಮುದ್ದಿಸುವನು. ನಾಯಿ ಲಚುಮನ ಹತ್ತಿರ ಹೋಗಿ ನಿಲ್ಲುವುದು.)

ಲಚುಮ—ಲಚುಮಿ, ನಾವಿದನ್ನು ಸಾಕೋಣ?

ಲಚುಮಿ—(ಬರುತ್ತಿದ್ದ ನಗುವನ್ನು ನುಂಗಿ) ಆಗಲಿ.

ಲಚುಮ—ಪಾಪ ಅದಕ್ಕೆ ಸ್ನೇಹಿತರಿಲ್ಲ!

ಸಾತು—ನಾವೆಲ್ಲಾ ಅದರ ಸ್ನೇಹಿತರು. ಅದನ್ನ ಆಡಿಸುತೀವಿ. ನಾಣಿ, ನೀನು ಅದನ್ನ ತಂಟೆಮಾಡಬಾರದಪ್ಪ.

ಲಚುಮಿ—ನಾಣಪ್ಪನೋರು ಬಹಳ ಒಳ್ಳೆಯವರು. ಅವರು ಅದಕ್ಕೆ ತೊಂದರೆ ಕೊಡೋದಿಲ್ಲ ಅಲ್ಲವೇ ನಾಣಪ್ಪನೋರೆ.

ನಾಣಿ—ನನ್ನ ಸೋಪು ಅದಕ್ಕೆ ಕೊಡುತೀನಿ. ನೀನು ಮೊದಲು ಅದರ ಮೈ ತೊಳೀಬೇಕು.

ಲಚುಮ—ಆಗಲಿ.

ಸಾತು—ಮರೆತಿದ್ದೆ. (ಜೋಬಿನಿಂದ ತಿಂಡಿ ತೆಗೆದು ಲಚುಮನಿಗೆ ಕೊಡುತ್ತಾ) ಇವತ್ತು ಈ ತಿಂಡಿ ಮಾಡಿದ್ದರು. ಎಲ್ಲರಿಗೂ ಕೊಡುತಾ ಅಮ್ಮನಿಗೆ ನಿನ್ನ ಜ್ಞಾಪಕ ಬಂತು. ಆಮೇಲೆ ಅಣ್ಣನೊಡನೆ ಆ ಲಚುಮ ಎಲ್ಲಿದ್ದಾನೋ ಹುಡುಕಿ ಬರಹೇಳಬೇಕು ಅಂದಳು. ಅಣ್ಣನ ಕೋಪ ಇನ್ನೂ ಇಳಿದಿರಲಿಲ್ಲ. ಲಚುಮನೂ ಬೇಡ ಗಿಚುಮನೂ ಬೇಡ. ಆಫೀಸಿನಿಂದಲೇ ಇನ್ನೊಬ್ಬ ಆಳನ್ನು ಕಳುಹಿಸಿಕೊಡುತೇನೆ ಅಂದು ಬಿಟ್ಟ. ನನಗೂ ತಿಂಡಿ ತಿನ್ನೋದಕ್ಕೆ ಆಗಲಿಲ್ಲ. ನಿನಗೋಸ್ಕರ ತೆಗೆದುಕೊಂಡು ಬಂದುಬಿಟ್ಟೆ.

ಲಚುಮ—ಊಂ (ಕಣ್ಣಲ್ಲಿ ತಳಿದ ನೀರನ್ನು ಒರಿಸಿಕೊಳ್ಳುವನು.)

ಜಯ—ನಾನೂ ನಿನಗೆ ತಿಂಡಿ ತಂದಿದ್ದೇನೆ. (ಕೊಡುವಳು)

ಲಚುಮ—(ಅವುಗಳನ್ನು ಮಕ್ಕಳಿಗೇ ಕೊಟ್ಟು) ನಿಮಗೆ ನಾನು ಏನು ತಂದಿದ್ದೀನಿ ಗೊತ್ತೋ? (ಕೋಲಾಟದ ಬಿದುರುಕೋಲುಗಳನ್ನು ಕೊಡುವನು. ಮಕ್ಕಳು ಸಂತೋಷದಿಂದ ತೆಗೆದುಕೊಳ್ಳುವರು.) ಬನ್ನಿ, ಇನ್ನು ಕೋಲಾಟವನ್ನು ಹುಯ್ಯೋಣ. (ಕೋಲು ಹುಯ್ಯುವರು)



ಬುದ್ಧಿಯ ಮಾತ ಕೇಳೋ | ಕಿಟ್ಟಣ್ಣ
ಶ್ರದ್ಧೆಯಿಂದಲಿ ಕೇಳೊ

ಸುಳ್ಳನಾಡಲುಬೇಡೊ, ಕಳ್ಳತನವು ಬೇಡೊ
ಕ್ಷುಲ್ಲರ ಸಂಗ ಸೇರ ಬೇಡೊ
ಕ್ಷುಲ್ಲರ ಸಂಗ ಸೇರ ಬೇಡೊ | ಕಿಟ್ಟಣ್ಣ
ಒಳ್ಳೇರ ಸಂಗ ಕಳಕೊ ಬೇಡೊ.

ಹಿರಿಯರ ಜರಿಯಬೇಡೊ ಗುರುವ ನಿಂದಿಸ ಬೇಡೊ
ಕಿರಿಯರು ಎಂದು ತೊರೆಯ ಬೇಡೊ
ಕಿರಿಯರು ಎಂದು ತೊರೆಯ ಬೇಡೊ | ಕಿಟ್ಟಣ್ಣ
ಗರುವದೊಳೆಂದೂ ಮೆರೆಯ ಬೇಡೊ

ಅಂಗಹೀನರು ಎಂದು ಎಂದೂ ಹಂಗಿಸ ಬೇಡೊ
ಹೆಂಗಸರೆಂದು ಹಳಿಯು ಬೇಡೊ
ಹೆಂಗಸರೆಂದು ಹಳಿಯು ಬೇಡೊ | ಕಿಟ್ಟಣ್ಣ
ತಂಗಿ ತಾಯಿಯರೊ ಮರೆಯು ಬೇಡೊ

ಹಾಳು ಹೊಲೆಯರು ಎಂದು ದೂರಸರಿಯಲು ಬೇಡೊ
ಕೀಳು ಜಾತಿಯರೆಂದು ಅಟ್ಟಬೇಡೊ
ಕೀಳು ಜಾತಿಯರೆಂದು ಅಟ್ಟಬೇಡೊ | ಕಿಟ್ಟಣ್ಣ
ಮೇಲು ಕೀಳು ಎಂಬ ಭೇದ ಬೇಡೊ

ಬಾಯಿಗೆ ಬಂದುದ ಬೇಗ ನುಡಿಯಲು ಬೇಡೊ
ಪ್ರಾಯ ಬಂದಾಗ ದುಡುಕ ಬೇಡೊ
ಪ್ರಾಯ ಬಂದಾಗ ದುಡುಕ ಬೇಡೊ | ಕಿಟ್ಟಣ್ಣ
ನ್ಯಾಯವ ಬಿಟ್ಟು ನಡೆಯು ಬೇಡೊ

ದುಡ್ಡ ಸ್ನೇಹಿತರಿಗೆ ಬಡ್ಡೀಗೆ ಕೊಡಬೇಡೊ
ಕಡ್ಡಾಯವಾಗಿ ಕೇಳಬೇಡೊ
ಕಡ್ಡಾಯವಾಗಿ ಕೇಳಬೇಡೊ | ಕಿಟ್ಟಣ್ಣ
ಅಡ್ಡೀಯೊ ಸ್ನೇಹಕ್ಕೆ ಮರೆಯುಬೇಡೊ

(ಲಚುಮಿ ಲಚುಮನನ್ನು ಅಲ್ಲೀಗೆ ತಡೆದು)

ಲಚುಮಿ—ಇನ್ನು ಹೋಗಬೇಕು, ಮಕ್ಕಳಿಗೆ ಹೊತ್ತಾಯ್ತು. ಬೇಗ ಕರಕೊಂಡು ಬರಹೇಳಿದಾರೆ. ನಾಳೆ ಬೆಳಗ್ಗೆ ನೀನೆಲ್ಲಿರುತ್ತೀ?

ಲಚುಮ—ಯಾತಕ್ಕೇ?

ಲಚುಮಿ—ಯಾತಕ್ಕೇ! ಈಗ ತಂದುಕೊಟ್ಟ ಬುತ್ತೀನೆಲ್ಲಾ ನಾಯಿಗೆ ಕೊಟ್ಟಿದ್ದಿ, ನಾಳೆ ಬೆಳಗ್ಗೆ ನಿನಗೆ ತಂಗಳು ತಂದುಕೊಡೋದಕ್ಕೆ.

ಲಚುಮ—ನನಗೂ ನಾಯಿಗೂ ಇಬ್ಬರಿಗೂ ತರತೀಯೇನು?

ಸಾತು—ನಾಯನ್ನ ನಾವು ಕರೆದುಕೊಂಡು ಹೋಗುತೇವೆ.

ಲಚುಮ—ರಾಯರು ಬಯ್ತಾರೆ. ಅದನ್ನು ಹೊಡೆದಟ್ಟುತಾರೆ.

ಲಚುಮಿ—ನಾಯಿ ನಮ್ಮ ಜೊತೆಯಲ್ಲಿ ಬರಲಿ. ಸರಸ್ವತಮ್ಮನೋರು ಬಹಳ ಒಳ್ಳೆಯೋರು.

ಜಯು-ಶಾಂತು—ನಾಯನ್ನ ನಾವು ಸಾಕುತ್ತೇವೆ.

ಲಚುಮಿ—(ಲಚುಮನನ್ನ ಕುರಿತು) ನಾಳೆ ಬೆಳಿಗ್ಗೆ ನೀನು ಇಲ್ಲಿಗೆ ಬಂದಿರು. (ಮಕ್ಕಳನ್ನು ಕುರಿತು) ಇನ್ನು ಬನ್ನಿ, ನಾವು ಹೋಗೋಣ. (ಎಲ್ಲರನ್ನೂ ಕರೆದುಕೊಂಡು ಹೋಗುವಳು.)

ಲಚುಮ—ಲಚುಮಿ, ನಿನ್ನ ಋಣ ಹೇಗೆ ತೀರಿಸೋದು!

(ಮೇಲಕ್ಕೆ ನೋಡಿ ದೇವರಿಗೆ ಕೈಮುಗಿಯುವನು.)

ಪರದೆ ಬೀಳುವುದು.

## ಮೂರನೆಯ ದೃಶ್ಯ

[ಪರದೆ ಮೇಲಕ್ಕೆ ಎದ್ದಾಗ ಲಚುಮಿ ನಾಯಿಯನ್ನು ಕರೆದುಕೊಂಡು ಪೆರಾಂಬ್ಯುಲೇಟರನ್ನು ನೂಕಿಕೊಂಡು ಬರುತ್ತಿರುವಳು. ಅದೇ ಪಾರ್ಕು.]

ಲಚುಮಿ—ಬಾ, ಕೆಂಚ, ಬಾ, ಮಕ್ಕಳನ್ನು ರಾಯರು ತಿಂಡಿ ಕೊಡಿಸಲು ಕರೆದುಕೊಂಡು ಹೋಗಿದ್ದಾರೆ. ಅವರು ಬರುವವರೆಗೂ ನಾವಿಬ್ಬರೇ ಇರೋಣ. ಅವರು ಬರುತಾ ನಿನಗೂ ತಿಂಡಿ ತರುತಾರೆ. ಬಾ, ನಾವು ಮೊದಲು ಲಚುಮ ಬಂದಿದ್ದಾನೋ ಇಲ್ಲವೋ ನೋಡೋಣ. ಲಚುಮ ಹೋಗಿಯಾಗಲೇ ಹತ್ತು ಹದಿನೈದು ದಿನಗಳಾದವು. ಅವನ ಸುದ್ದಿಯೇ ಇಲ್ಲ ನೋಡು. ಎಲ್ಲಿಗೆ ಹೋದನೋ! ನಿನ್ನ ನಮ್ಮ ವಶಕ್ಕೆ ಕೊಟ್ಟುಹೋದವನು ಈ ಹೊತ್ತಿನವರೆಗೂ ಪತ್ತೆ ಇಲ್ಲ. ಅಲ್ಲಾ ನಾನು 'ನಿಮ್ಮಿಬ್ಬರಿಗೂ ತಿಂಡಿ ತಂದುಕೊಡಲಾರೆ ನನ್ನ ಬದುಲು ನಿನ್ನ ನೋಡಿಕೊ ನೀನು ಮೂಕಪ್ರಾಣಿ' ಅಂತ ಬಿಟ್ಟು ಹೋಗಿಬಿಟ್ಟನೇ? ನಾನು ನಿಮ್ಮಿಬ್ಬರಿಗೂ ತಿಂಡಿ ತಂದು ಹಾಕಲಾರದೆ ಹೋದೆನೆ? ತಿಂಡಿ ಕೊಡೋನು ನಾನೆ? ಕೊಡೋನು ದೇವರು. ತಬ್ಬಲಿಯಾದ ನನಗೆ ಅನ್ನ ಕೊಟ್ಟವನು ಯಾರು? ನನ್ನ ತಾಯಿ ನನ್ನ ಬಿಟ್ಟು ಹೋದಳು. ಸರಸ್ವತಮ್ಮನೋರನ್ನೂ ನನಗೆ ತೋರಿಸಿಕೊಟ್ಟವನು ಯಾರು? ಎಲ್ಲರಿಗೂ ಅನ್ನ ಬಟ್ಟೆ ಕೊಡೋನು ಅವನು! ಆ ಮಾಗಡಿ ರಂಗ! ಲಚುಮಯ್ಯನಿಗೆ ಅಷ್ಟು ತಿಳೀದೇ ಹೋಯಿತೇ? ಎಲ್ಲಿಗೆ ಹೋದ?

(ಪೆರಾಂಬ್ಯುಲೇಟರನ್ನು ಅಲ್ಲಿ ಬಿಟ್ಟು ಒಂದು ಬೆಂಚಿನ ಮೇಲೆ ನಾಯಿಯನ್ನು ಕೂಡಿಸಿಕೊಂಡು, ಕುಳಿತು ಹಾಡುವಳು.)

ಏನಾದ ಲಚುಮಯ್ಯನು | ರಂಗಪ್ಪ
ಎಲ್ಲೀಗೆ ಹೋಗಿರ್ಪನು
ಎಲ್ಲೀಗೆ ಹೋಗಿರ್ಪನು | ನನ್ ಬಿಟ್ಟು
ಯಾರಲ್ಲಿ ನಿಂತಿರ್ಪನು

ನೀನವನ ಕಾಯಬೇಕೊ | ರಂಗಪ್ಪ
ದಾರಿಯನು ತೋರಬೇಕೊ
ಏನನ್ನು ಅರಿಯದವನೊ | ರಂಗಪ್ಪ
ಎಳೆ ಕುನ್ನಿಯಂತಿರುವನೊ

ಕಷ್ಟವನು ಸಹಿಸಲಾರ | ರಂಗಪ್ಪ
ನಷ್ಟವನು ತಾಳಲಾರ
ಕಷ್ಟವನು ನನಗೆ ಕೊಟ್ಟು | ರಂಗಪ್ಪ
ಲಚುಮಯ್ಯನನ್ನು ಪೊರೆಯೊ

ಕೆಂಚಾ, ನೀನಿಷ್ಟು ಚೆನ್ನಾಗಿರುವುದನ್ನ ಲಚುಮ ನೋಡಿದ್ದರೆ ಎಷ್ಟು ಸಂತೋಷಪಟ್ಟುಕೊಳ್ಳುತ್ತಿದ್ದ (ನಾಯಿಯ ಮೈಮೇಲೆ ಕೈಯಾಡಿಸುತ್ತಾ ಕುಳಿತಿದ್ದು ತಲೆಯೆತ್ತಿ ನೋಡಿ) ಕೆಂಚಾ ನೋಡಲ್ಲಿ ಯಾವನೋ ಸಿಪಾಯಿ ನಮ್ಮನ್ನೇ ನೋಡುತ್ತ ನಿಂತಿದ್ದಾನೆ. ಈ ಕಡೆಗೇ ಬರುತಿದ್ದಾನೆ. ಕೆಂಚಾ, ಬಾಪ್ಪ, ನಾವು ಈ ಜಾಗ ಬಿಟ್ಟು ಹೊರಟು ಹೋಗೋಣ.

(ನಾಯಿ ಸಿಪಾಯಿಯನ್ನು ನೋಡಿ ಅವನ ಹತ್ತಿರಕ್ಕೆ ಓಡಿಹೋಗುವುದು. ಲಚುಮ ಸಿಪಾಯಿಯ ಬಟ್ಟೆಯಲ್ಲಿ ಬರುವನು. ನಾಯಿಯೂ ಜೊತೆಯಲ್ಲಿ ಬರುವುದು)

ಲಚುಮ—ಲಚುಮೀ

ಲಚುಮಿ—ಆ !!........ನನ್ನ ಕಣ್ಣನ್ನು ನಾನೇ ನಂಬೋಹಾಗಿಲ್ಲ. ಇಷ್ಟು ದಿನ ಎತ್ತ ಹೋಗಿಬಿಟ್ಟಿದ್ದೆ ? ಹೇಗೆ ಬಂತು ಈ ಸಿಪಾಯಿತನ ?

ಲಚುಮ—ಮಕ್ಕಳೆಲ್ಲಿ ?

ಲಚುಮಿ—ರಾಯರು ಮಕ್ಕಳನ್ನು ಮಾರ್ಕಟ್ಟೆಗೆ ಕರೆದುಕೊಂಡು ಹೋದರು. ತಿಂಡಿ ಕೊಡಿಸಿ ಕರೆಕೊಂಡು ಬರುತಾರಂತೆ. ಕೆಂಚನ್ನ ನೋಡು ಇಲ್ಲೇ ಅವನೆ.

ಲಚುಮ—ನಾಯಿಗೆ ಕೆಂಚಾ ಎಂತ ಹೆಸರಿಟ್ಟಿಯೇನು !

ಲಚುಮಿ—ಹೌದು, ನನಗೆ ಕೆಂಚಾ ಅಂತ ತಮ್ಮ ಇದ್ದ. ಐದು ವರುಷ ಆಯ್ತು ತೀರಿಕೊಂಡುಬಿಟ್ಟ. ಅವನ ಹೆಸರನ್ನೇ ಈ ಹೈದನಿಗೆ ಇಟ್ಟೇನಿ.

ಲಚುಮ—ಇಲ್ಲಿ ಕುಂತ್ಕೊಳ್ಳೇ ಬಾ. ನಿನಗೊಂದು ವಿಚಾರ ಹೇಳಿ ಹೋಗೋಣ ಅಂತ ಬಂದೀನಿ. ಏನೋ ಕೊಟ್ಟುಹೊಗೋದಕ್ಕೆ ಬಂದೀನಿ.

ಲಚುಮಿ—ಏನು ಅದು ಬಿಟ್ಟುಹೋಗೋದಕ್ಕೆ ಬಂದೆಯಾ?

ಲಚುಮ—ಅಲ್ಲಾ ಲಚುಮಿ, ಕೊಟ್ಟುಹೋಗೋದಕ್ಕೆ ಬಂದೇನಿ. ಬಿಟ್ಟು ಹೋಗೋದುಕ್ಕೂ ಅನ್ನು. ನೋಡು ಇದು. ಏನಿದು ಅಂತಿ!

(ಸುರುಳಿ ಸುತ್ತಿದ ಕಾಗದ ಕೊಡುವನು)

ಲಚುಮಿ—ಏನೋ ಇದು ನನಗೆ ತಿಳೀದು. ನನಗೇನು ಓದೋಕೆ ಬರತದಾ.

ಲಚುಮ—ಇದು ಸರಕಾರಕ್ಕೂ ನನಗೂ ಆದ ಒಪ್ಪಂದ.

ಲಚುಮಿ—ಸರಕಾರದೊಡನೆ ನಿನಗೇನು ಒಪ್ಪಂದ!

ಲಚುಮ—ನೋಡು ಅವತ್ತಿನಿಂದ ಕೆಲಸ ಹುಡುಕುತಾ ಇದ್ದೆನಲ್ಲಾ ಆಫೀಸು, ದೊಡ್ಡಮನುಷ್ಯರ ಮನೆ, ಎಲ್ಲಾ ಕಡೆಯೂ ಹೋಗಿ ಕೇಳಿಕೊಂಡಿದ್ದಾಯ್ತು. ಎಲ್ಲೂ ಕೆಲಸ ಸಿಕ್ಕಲಿಲ್ಲ. ಕೊನೆಗೆ ಒಂದು ದಿನ ಇಲ್ಲಿ ಈ ಪಾರ್ಕಿನಲ್ಲಿ ಕೂತಿದ್ದಾಗ ಒಬ್ಬ ಮಹರಾಯ ಇಲ್ಲಿಗೆ ಬಂದ. ಆ ಮಹರಾಯನ ಮಕ್ಕಳು ಮರಿ ತಣ್ಣಗೆ ಬದುಕಲಿ ಅಂತೀನಿ. ಆತನೇ ನನಗೆ ಕೆಲಸ ಮಾಡಿಸಿಕೊಟ್ಟ. ನೋಡು ಈ ದಿರಿಸ್ನ ಸರಕಾರದೋರು ಕೊಟ್ಟರೋದು. ಸೀಮೆಗೆ ನಮ್ಮನ್ನ ಕಳುಹಿಸಿ ಕೊಡುತಾರಂತೆ. ಯುದ್ಧ ಆಗುತದಲ್ಲಾ ಅಲ್ಲೀಗೆ. ಯುದ್ಧ ಮಾಡಿ ಗೆದ್ದುಕೊಂಡು ಬರೋದಕ್ಕೆ ಹೋಗುತೇವೆ.

ಲಚುಮಿ—ಅಯ್ಯೋ ಯುದ್ಧಕ್ಕೆ ಹೋಗಬೇಕಾ, ನೀನು?

ಲಚುಮ—(ಲಚುಮಿಯನ್ನು ಕೂಡಿಸಿಕೊಂಡು ಕಲ್ಲುಬೆಂಚಿನ ಮೇಲೆ ಕುಳಿತು) ಯಾಕೆ, ಲಚುಮಿ, ಹೆಣ್ಣಿನಹಂಗೆ ಕಣ್ಣೀರಿಡುವೆ. ನೋಡು, ನಾನು ಹೋಗಿ ಗೆದ್ದುಕೊಂಡು ಬರುತೀನಿ. ಹಿಂದಕ್ಕೆ ಬಂದಾಗ, ನಾನು ಜಮೇದಾರ; ಸರದಾರ. ಬರಲಿಲ್ಲೋ ಇಗೋ ಈ ಕಾಗದ, ಇದರಲ್ಲಿ ಬರದಿದೆ; ಒಂದು ಸಾವಿರ ರೂಪಾಯಿ ಕೊಡುತಾರೆ ನಿನಗೆ. ರೈಟರು ಇದನ್ನ ಬರೀವಾಗ ಕೇಳಿದರು ನಿಮ್ಮ ಮನೆಯೋರು ಯಾರ ಹೆಸರಿಗೆ

ಬರೀಲಿ ಅಂತ, ನಿನ್ನ ಹೆಸರು, ನಿಮ್ಮ ಆಮ್ಮಾವರ ಮನೆ ಅಡ್ರೆಸ್ಸು ಬರಸಿದ್ದೀನಿ.

ಲಚುಮಿ—ನಿನ್ನ ದುಡ್ಡು ಯಾರಿಗೆ ಬೇಕು. ನೀನು ಸೌಖ್ಯವಾಗಿ ಬಂದರೆ ಸಾಕು. ನನ್ನನ್ನ ಕೇಳದೆ ಯಾಕೆ ಅಲ್ಲೀಗೆ ಸೇರಿದೆ?

ಲಚುಮ—ಅಲ್ಲಾ ಲಚುಮಿ, ನಾನೇನು ನಿನ್ನ ಅಧೀನ ಆಗಿಬಿಟ್ಟಿನೆ ಆಗಲೇ, ಎಲ್ಲಾ ನಿನ್ನ ಕೇಳಿ ಮಾಡೋಡಕ್ಕೆ?

ಲಚುಮಿ—(ಕುಳಿತ ಜಾಗ ಬಿಟ್ಟಿದ್ದು) ಮಕ್ಕಳೆಲ್ಲಾ ಬರುತಾ ಅವ್ರೆ, ರಾಯರೂ ಬರುತಾರೆ ಅಂತ ಕಾಣುತ್ತೆ.

ಲಚುಮ—ಹಾಗಾದರೆ ನಾನು ಹೋಗಿ ಮರೇಲಿ ಇರುತೇನಿ.

(ಅಷ್ಟು ಹೊತ್ತಿಗೆ ಮಕ್ಕಳೆಲ್ಲಾ ಅಲ್ಲಿಗೆ ಓಡಿಬರುವರು)

ಮಕ್ಕಳು—ಒಹ್ಹೊ! ಲಚುಮ ಸಿಪಾಯಿ ಆಗಿಬಿಟ್ಟದ್ದಾನೆ!

(ಅವನನ್ನು ಮುತ್ತುವರು)

ಲಚುಮಿ—ರಾಯರೆಲ್ಲಿ?

ನಾಣಿ—(ಲಚುಮಿ ಕೈಗೆ ತಿಂಡಿ ಪೊಟ್ಣ ಕೊಡುತ್ತಾ) ಅಣ್ಣ ನಮ್ಮನ್ನು ಕಳುಹಿಸಿ ಕೊಟ್ಟು ಹೊರಟುಹೋದ.

ಸಾತು—ಲಚುಮಾ, ಎಲ್ಲೀಗೆ ಹೋಗಿದ್ದೆಯೋ ಇಷ್ಟು ದಿನ?

ಜಯು—ಸೈನ್ಯಕ್ಕೆ ಹೋಗಿ ಸೇರಿಕೊಂಡೆಯೇನು?

ಶಾಂತು—ಸೈನ್ಯದ ಕತೆಯನ್ನೆಲ್ಲಾ ಹೇಳಬೇಕಪ್ಪ. ಅಲ್ಲಿ ಏನೇನು ಮಾಡಿಸುತಾರೆ ಎಲ್ಲಾ ಹೇಳಬೇಕು ಈಗ.

ಲಚುಮ—ಬನ್ನಿ ಹೇಳುತೇನೆ. (ಎಲ್ಲರನ್ನೂ ಕೂಡಿಸಿಕೊಂಡು ,ಕುಳಿತು ಕೊಳ್ಳುವನು. ಸೊಂಟಕ್ಕೆ ಹಾಕಿಕೊಂಡಿದ್ದ ಬೆಲ್ಟನ್ನು ಬಿಚ್ಚಿ ರುಮಾಲನ್ನು ಕೆಳಗಡೆ ಇಡುವನು. ನಾಣಿ ಅವನ ಬೆಲ್ಟನ್ನು ತೆಗೆದು ತಾನು ಹಾಕಿಕೊಳ್ಳುವನು. ಸಾತು ರುಮಾಲನ್ನು ಇಟ್ಟುಕೊಳ್ಳುವಳು.) ಅಲ್ಲಿ ಕವಾತು ಮಾಡಿಸುತಾರೆ. ಒಬ್ಬ ಮೊದಲು ಬ್ಯೂಗಲ್ ಊದುತಾನೆ. (ಕೈಯನ್ನು ಬಾಯಿಯ ಹತ್ತಿರ ಇಟ್ಟು ಬ್ಯೂಗಲ್ ಊದಿದ ಹಾಗೆ ಧ್ವನಿ ಮಾಡುತ್ತಾನೆ) ನಾವೆಲ್ಲಾ ಪಾಲೆನ್ನು ಆಗುತೇವಿ. ಆಮೇಲೆ ಕವಾತು ಮಾಡುತೇವೆ.

ಸಾತು—ನಾವೂ ಕವಾತು ಮಾಡೋಣ. ಅಲ್ಲಿ ಹೇಗೆ ಮಾಡಿಸುತ್ತಾರೋ ಹಾಗಿಲ್ಲಿ ಮಾಡಿಸಬೇಕು.

ಶಾಂತು—ನಮಗೆ ಬಂದೂಕು?

ನಾಣಿ—(ಓಡಿಹೋಗಿ ಗಿಡದ ಕಡ್ಡಿಗಳನ್ನು ಕಿತ್ತುಕೊಂಡು ಬಂದು) ಇಗೋ ಇವು. (ಒಬ್ಬೊಬ್ಬರಿಗೆ ಒಂದೊಂದನ್ನು ಕೊಡುತ್ತಾನೆ.)

ಲಚುಮ—ನಾಣಪ್ಪನೋರೇ ಏನು ಕೆಲಸ ಮಾಡಿಬಿಟ್ಟಿರಿ! ಪಾರ್ಕಿನ ಮಾಲಿ ನೋಡಿದರೆ ಏನಂತಾನೆ.

ನಾಣಿ—ಎಲ್ಲಾ ಒಣಗಿರೋವುಕಣೋ.

ಲಚುಮ—ಆಗಲಿ ಬನ್ನಿ ಇಲ್ಲಿ ನಿಂತುಕೊಳ್ಳಿ.

ಲಚುಮಿ—ಲಚುಮಾ, ತಿಂಡೀನ ನೀನೂ ಸ್ವಲ್ಪ ತಕೋ.

(ಲಚುಮನಿಗೂ ನಾಯಿಗೂ ಎಲ್ಲವನ್ನೂ ಕೊಟ್ಟುಬಿಡುವಳು)

ಸಾತು—ಲಚುಮಿ ನಿನಗೇ?

(ತನ್ನ ಜೋಬಿನಲ್ಲಿ ತನ್ನ ಪಾಲು ಇಟ್ಟುಕೊಂಡಿದ್ದನ್ನು ಕೊಡಹೋಗುವಳು)

ಲಚುಮ—ಸಾತಮ್ಮನೋರೆ ನಾನು ಕೊಡುತೇನೆ. ನೀವು ಸುಮ್ಮನೆ ಇರಿ. (ತನಗೆ ಕೊಟ್ಟದ್ದರಲ್ಲಿ ಲಚುಮಿಗೆ ಕೊಡುವನು. ಲಚುಮಿ ಅದನ್ನು ಕಣ್ಣಿಗೆ ಒತ್ತಿಕೊಂಡು ಬಾಯಿಗೆ ಹಾಕಿಕೊಳ್ಳುವಳು.)

ಲಚುಮ—ಛಾರ್ಲಿ, ನಿಂತುಕೊಳ್ಳಿ ಎಲ್ಲಾ.

(ಬ್ಯೂಗಲ್ ಊದಿದ ಹಾಗೆ ಊದುವನು. ಎಲ್ಲರೂ ನಿಂತುಕೊಳ್ಳುವರು.)

ಶಾಂತು—ಲಚುಮಿ, ನೀನೂ ನಿಂತುಕೋ ಬಾ ಇಲ್ಲಿ.

(ಲಚುಮಿ ಬಂದು ನಿಂತುಕೊಳ್ಳುವಳು)

ಲಚುಮ—ಒಂದು, ಎರಡೂ ಹೇಳಿ.

ನಾಣಿ—ಒಂದು

ಶಾಂತು—ಎರಡು

ಜಯು—ಮೂರು

ಪದ್ದು—ನಾಲ್ಕು

ಸಾತು—ಐದು

ಲಚುಮ—ಲಚುಮಿ, ನೀನು ಆರು ಅನ್ನು

ಲಚುಮಿ—ಆರು

ಲಚುಮು—ಎರಡು ನಾಲ್ಕು ಆರು ಎರಡೆಜ್ಜೆ ಹಿಂದಕ್ಕೆ.

(ಡ್ರಿಲ್ ಮಾಡಿಸುವನು)

ಇನ್ನು ಮಾರ್ಚ್ ಮಾಡಿಸೋಣ.

ಒಂದು ಎರಡು ಮೂರು ನಾಲ್ಕು
ಹೆಜ್ಜೆ ಒಂದೆಸಮಕೆ ಹಾಕು
ಒಂದು ಎರಡು ಮೂರು ನಾಲ್ಕು
ನಾಣಿ ನಿನ್ನ ಹೆಜ್ಜೆ ಮುಂದು
ಒಂದು ಎರಡು ಮೂರು ನಾಲ್ಕು

(ಲಚುಮು ಹಾಡು ಹೇಳಿಕೊಡುವನು. ಎಲ್ಲರೂ ಹೇಳುವರು)

ಅಣ್ಣಾಸಾಮಿ
ಮನೇಲೊಂದು
ಬೆಕ್ಕು ಮರಿ
ಹಾಕಿತ್ತು
ಲೆಫ್ಟು ರೈಟ್ ಲೆಫ್ಟು ರೈಟ್
ಪದ್ದಂನೋರು
ಹಾಲನ್ ಕಾಸಿ
ಬೆಕ್ಕಿನ ಮರಿಗೆ
ಕೊಟ್ಟದ್ರು
ಲೆಫ್ಟು ರೈಟ್, ಲೆಫ್ಟು ರೈಟ್
ಅಣ್ಣಾಸಾಮಿ
ಮನೇ ನಾಯಿ
ಟೈಗರ್ ಬೌ ಬೌ
ಅಂತಿತ್ತು
ಲೆಫ್ಟು ರೈಟ್ ಲೆಫ್ಟು ರೈಟ್
ಪದ್ದಂನೋರು
ಹೊರಟ್‌ಹೋದ್‌ಮೇಲೆ
ಟೈಗರ್ ಅಲ್ಲಿಗೆ ಓಡ್ಬಂತು
ಲೆಫ್ಟುರೈಟ್ ಲೆಫ್ಟುರೈಟ್

ಲಚುಮ—ಮಾರ್ಚ್ ಫಾಸ್ಟ್. ಬೇಗಬೇಗ ಹೆಜ್ಜೆ ಹಾಕಬೇಕು.

ಬೆಕ್ಕಿನ ಮರೀನ್
ಓಡ್ಸಿಬಿಡ್ತು
ಲೆಫ್ಟ್ ರೈಟ್, ಲೆಫ್ಟ್ ರೈಟ್
ಹಾಲನ್ನೆಲ್ಲಾ
ಕುಡಿದುಬಿಡ್ತು
ಲೆಫ್ಟ್‌ರೈಟ್, ಲೆಫ್ಟ್‌ರೈಟ್
ನಾಲ್ಗೆ ಸವರ್ಕ್ಕೊಂಡು
ಹೊರಟ್‌ಬಿಡ್ತು
ಲೆಫ್ಟ್ ರೈಟ್, ಲೆಫ್ಟ್ ರೈಟ್

ಲಚುಮಿ—ಇಂತಾ ಹಾಡುಗಳೇನಾ ಹೇಳಿಕೊಡೋದಲ್ಲಿ?

ಲಚುಮ—ಇನ್ನೂ ದೊಡ್ಡದೊಡ್ಡದು ಹೇಳಿಕೊಡುತಾರೆ. ಎಲ್ಲಿ ನಾವು ಈ ಜಾಗ ಬಿಟ್ಟು ಬೇರೆ ಜಾಗಕ್ಕೆ ಹೊರಟುಹೋಗುತ್ತಾ ಇದ್ದೇವೆ ಅನ್ನಿ, ಬಟ್ಟೆ ಬರೆ ಕಟ್ಕೊಂಡು. ಊಂ ನಿಲ್ಲಿ. ನೆಟ್ಟಗೆ ನಿಂತುಕೊಳ್ಳಿ. (ಎಲ್ಲರ ಬಳಿಗೂ ಹೋಗಿ ಪರೀಕ್ಷಿಸುವಂತೆ ನಟಿಸಿ) ಊಂ...ಇನ್ನು ಹೊರಡಿ.

ನನ್ನ ನನ್ನ ನನ್ನ ನನ್ನ
ನನ್ನ ನನ್ನ ನಾ
ನನ್ನ ನನ್ನ ನನ್ನ ನನ್ನ
ನನ್ನ ನನ್ನ ನಾ

ಊಂ ಸರಿಯಾಗಿ ಹೆಜ್ಜೆ ಹಾಕಬೇಕು.

(ಹಾಡನ್ನು ಹೇಳಿಕೊಡುವನು. ಎಲ್ಲರೂ ಹೇಳುವರು)

ಲೆಫ್ಟ್ ರೈಟ್ ಲೆಫ್ಟ್ ರೈಟ್
ಕನ್ನಡಿಗರೇ
ಶಸ್ತ್ರಗಳನು ಪಿಡಿದು ಬನ್ನಿ
ಸಮರಭೂಮಿಗೆ
ಪರರ ದಾಸ್ಯ ಹಂಗನಿಂದು
ತೊಲಗಿಸಾಚೆಗೆ

ನಾಡ ಧ್ವಜವ ಹಿಡಿದು ಎತ್ತಿ
ನಾಡಿನೇಳ್ಗೆಗೆ
ಗಂಗ ಚೋಳ ಚಾಲುಕ್ಯ
ವಿಜಯನಗರದ
ವೈಭವವನು ನೆನೆಸಿಕೊಳ್ಳಿ
ವೀರ ಕುವರರೇ
ಒಬ್ಬ ನಾಯ್ಕ ನಮ್ಮ ನಾಡ್ಗೆ
ಅವನ ಕೆಲದಲಿ
ಛಿದ್ರವಾದ ನಾಡನಿಂದು
ಕಟ್ಟಿ ಕಾದುವ
ಕಾವೇರಿಯಿಂದ ಗೋಥೆ
ವರಿಗೆ ಇರುವ ನಾಡ್
ಒಂದುಗೂಡಿ ಒಂದೆ ಧ್ವಜದ
ನೆಲೆಗೆ ಬಾಳಲಿ

ಲಚುಮು—ಈಗ ನಿಧಾನವಾಗಿ ಹೆಜ್ಜೆ ಹಾಕಬೇಕು. ಊಂ. ಈ ಹಾಡನ್ನು ಹೇಳುತ್ತಾ ನಡೆಯಬೇಕು. ಹೇಳಿ.

ಹಿಂದೂಸ್ಥಾನದ ಸೈನಿಕರೂ, ನಾವ್
ಒಂದೇ ನಾಡಿನ ಸೇವಕರೂ
ಒಂದೇ ಹೆಜ್ಜೆಯನಿಕ್ಕುತ ಹೊರೆಟೆವು
ಒಂದೇ ಗುರಿಯನು ಮುಟ್ಟುವೆವು

ವಂಗರು ಗೂರ್ಕರು ಪಂಜಾಬಿಗಳೂ
ಕನ್ನಡ ಕಲಿಗಳು ಮರಾಠರೂ
ಕ್ರಿಸ್ತರು ಮುಸಲರು ಪಾರ್ಸೀ ಕುಲಜರು
ಆರ್ಯರು ಉಳಿದಾ ದ್ರಾವಿಡರು

ಜಾತಿಯು ಮತವೂ ಕುಲವೂ ನಿಲುವೂ
ನಮ್ಮಲಿ ಭೇದಗಳೊಂದಿಲ್ಲ
ನಮ್ಮೀ ನಾಡಿಗೆ ಕೇಡನು ಬಯಸುವ
ಜನರಿಗೆ ನಮ್ಮೊಳು ಎಡೆಯಿಲ್ಲ

(ಹಾಡನ್ನು ಹೇಳಿಕೊಂಡು ಮಕ್ಕಳು ರಂಗಸ್ಥಳದಿಂದ ಹೊರಟುಹೋಗುವರು. ಲಚುಮ ಕಮಾಂಡರಂತೆ ನಿಂತುಕೊಂಡು ಸೆಲ್ಯೂಟು ಮಾಡುತ್ತಿರುವನು. ಒಬ್ಬೊಬ್ಬರಾಗಿ ಹೊರಟುಹೋದಮೇಲೆ ಕೊನೆಯಲ್ಲಿದ್ದ ಲಚುಮಿಯನ್ನು ನಿಲ್ಲಿಸಿಕೊಳ್ಳುವನು.)

ಲಚುಮ—ಲಚುಮಿ, ನಾಳೆ ನಾನು ಬೆಂಗಳೂರನ್ನು ಬಿಟ್ಟುಬಿಡಬೇಕು. ಈ ಮಕ್ಕಳನ್ನು ಹೇಗೆ ಬಿಟ್ಟು ಹೋಗಲಿ? ನಿನ್ನನ್ನು ಬಿಟ್ಟು ಹೇಗಿರಲಿ?

(ಲಚುಮಿಯನ್ನು ಅಪ್ಪಿಕೊಳ್ಳಲು ಹೋಗುವನು. ಅಷ್ಟರಲ್ಲಿ ನಾಯಿ ಹಿಂದಕ್ಕೆ ಓಡಿಬಂದು ಅವರಿಬ್ಬರ ನಡುವೆ ನಿಲ್ಲುವುದು. ಮೇಲುಗಡೆ ಇದ್ದ ಹೊಂಗೆಮರದಿಂದ ಹೂ ಉದುರುವುದು. ತಲೆಯೆತ್ತಿ ನೋಡುತ್ತಿರುವರು. ದೂರದಲ್ಲಿ ಬ್ಯೂಗಲ್ ಶಬ್ದ ಕೇಳಿಬರುವುದು. "ಬಂದೆ" ಎನ್ನುತ್ತಾ ಲಚುಮ ಹೊರಟುಹೋಗುವನು. ಲಚುಮಿ ಮತ್ತು ಕೆಂಚ ಆಕಡೆ ನೋಡುತ್ತಿರುವರು.)

ಪರದೆ ಬೀಳುವುದು.

(ಹಿಮ್ಮೇಳದವರು ಹಾಡುವರು)

ಕಾಕೀ ಬಟ್ಟೆಯ ಪೋಷಾಕ್ ಹಾಕಿ
ಹೊರಟಾನೊ ಲಚುಮ | ಯುದ್ಧಕೆ
ಹೊರಟಾನೊ ಲಚುಮ

ಕೈಯಲಿ ಕೋವಿ ಏನದು ಠೀವಿ
ನಡೆದಾನೊ ಲಚುಮ | ಲೆಫ್ಟ್‌ರೈಟ್
ನಡೆದಾನೊ ಲಚುಮ

ಇಲ್ಲಿಂದಲ್ಲಿಗೆ ಪಶ್ಚಿಮದೇಶಕೆ
ತೆರಳಿದನೊ ಲಚುಮ | ಹಡಗಲಿ
ಹೊರಳಿದನೊ ಲಚುಮ

ಕೆಟ್ಟವರನ್ನು ಕ್ರೂರಿಗಳನ್ನು
ಕಾಡಿಹನೊ ಲಚುಮ | ಧ್ವಂಸ
ಮಾಡಿಹನೊ ಲಚುಮ

ಧರ್ಮಕೆ ಎಂದೂ ಗೆಲವಿಹುದೆಂದು
ಹಾಡಿಹನೊ ಲಚುಮ | ಅಭಯವ
ನೀಡಿಹನೊ ಲಚುಮ

# ಉತ್ತರಾಂಕ

## ಮೊದಲನೆಯ ದೃಶ್ಯ

[ಲಚುಮಿಯನ್ನೂ ಮಕ್ಕಳನ್ನೂ ಬಿಟ್ಟು ಲಚುಮ ಯುದ್ಧಭೂಮಿಗೆ ತೆರಳಿ ಆಗಲೇ ಒಂದು ವರ್ಷವಾಗಿದೆ. ಅವನಿಂದ ಸುದ್ದಿಯೇ ಇಲ್ಲ. ಎಂದಿನಂತೆಯೇ ಪ್ರತಿ ಸಂಜೆಯೂ ಲಚುಮಿ ಮತ್ತು ಮಕ್ಕಳು ಪಾರ್ಕಿಗೆ ಬಂದುಹೋಗುತ್ತಿದ್ದಾರೆ. ಲಚುಮಿಯು ಲಚುಮ ಇಂದು ಬರುವನೋ ನಾಳೆ ಬರುವನೋ ಎಂದು ಎದುರು ನೋಡುತ್ತಿದ್ದಾಳೆ. ಈ ದಿನ ಸಂಜೆಯೂ ಮಕ್ಕಳಿಗಿಂತ ಮುಂಚೆಯೇ ಪಾರ್ಕಿಗೆ ಬಂದು ಎದುರುನೋಡುತ್ತಾ ಕುಳಿತಿದ್ದಾಳೆ. ಪರದೆ ಮೇಲಕ್ಕೆ ಹೋದಾಗ ಹೊಂಗೆಯ ಮರದಡಿ ಶಿಲಾಸನದಲ್ಲಿ ಲಚುಮಿ ಕುಳಿತಿರುವುದು ಕಾಣಿಸುವುದು. ಹಾಡುತ್ತಿರುವಳು]

ಲಚುಮಿ— ಬಂದೆ ಬಂದೆ ಎಂದು
ಹೊರಟ್‌ಹೋದ ಲಚುಮಯ್ಯ
ಒಂದು ವರುಷವಾಯ್ತು
ಬರಲಿಲ್ಲಾ

ಅಂದು ನನ್ನನು ಇಲ್ಲೆ
ಬಿಟ್‌ಹೋದ ಲಚುಮಯ್ಯ
ಅಂದಿನ ದಿನ ಬಂತು
ಬಂದಿಲ್ಲಾ

ಅಂದು ಅವನ ಮೇಲೆ
ಹೂಮಳೆ ಕರೆಯಿತು
ಹೊಂಗೆಯ ಈ ಮರ
ಅಂದಿಲ್ಲಿ

ಇಂದು ಹೂರಾಸಿಯ
ಚೆಲ್ಲುತ್ತಲಿರುವುದು
ಅಂದಿದ್ದ ಹರುಷ
ಇಂದಿಲ್ಲ

ಹಿಂದೊಮ್ಮೆ ಹೀಗೆಯೆ
ಬಿಟ್ಹೋದ ಸಮಯದಿ
ಎಲ್ಲಾದರು ಅವನು
ಸುಖದಿಂದ

ಇರು ಎಂದು ಹರಸಿದ್ದೆ
ಹಾಗೆ ನಾ ಬಯಸಿದ್ದೆ
ಇಂದು ಹಾಗೆನ್ನದು
ಈ ಆತುಮ

ಅವನನ್ನ ಕಾಣಲು
ಕಾತರಗೊಂಡಿದೆ
ಅವನಲ್ಲೆ ನಿಂತಿದೆ
ಈ ಮನಸು

ಅಂದಿನ ಆ ರೂಪು
ಎದುರೊಳು ನಿಲುವುದು
ಕೆಲಸವನೆಲ್ಲಾ
ಮರೆಸುವುದು

ನಮ್ಮ ಅಮ್ಮಾವರು
ಎಷ್ಟು ಒಳ್ಳೇಯೋರು
ಎಷ್ಟೊಂದು ಚೆನ್ನಾಗಿ
ನೋಡ್ಕೊಂಬೊರು

ಎಷ್ಟು ಪ್ರೀತಿಯಿದೆ
ಮಕ್ಕಳಿಗೆನ್ನಲಿ
ಬೆಳಗು ಬೈಗೂ ಎನ್ನ
ಎಡಬಿಡರು

ಎಷ್ಟಿದ್ದರು ಏಕೊ
ಒಂದು ಬೇಕೆನಿಸದು
ಲಚುಮಯ್ಯ ಲಚುಮಯ್ಯ
ಮನ ಅವನೊಳು

ಹಗಲು ನೆನಸಿನೊಳು
ರಾತ್ರಿ ಕನಸಿನೊಳು
ಅವನೆ ನಿಂತಿರುವನು
ಬಾಳಿನೊಳು

ಮನೆಯೋರು ಮರೆತಿಲ್ಲ
ಮಕ್ಕಳು ಮರೆತಿಲ್ಲ
ಯಾವಾಗಲು ಅವನ
ನೆನೆಯುವರು

ಅವನು ಹೇಳಿ ಕೊಟ್ಟ
ಪದಗಳ ಹೇಳುತ್ತ
ಕಳೆವರು ಸಂಜೆಯ
ಪಾರ್ಕಿನೊಳು

(ಹಗ್ಗದ ಆಟ ಆಡುತ್ತಾ ಪದ್ದು, ಜಯು, ಶಾಂತು ಪ್ರವೇಶಿಸುವರು. ಜಯು ಮತ್ತು ಶಾಂತು ಹಗ್ಗದ ಎರಡು ಕೊನೆಗಳನ್ನು ಹಿಡಿದು ಹಗ್ಗವನ್ನು ಆಡಿಸುತ್ತಿರುವರು. ಪದ್ದು ಕುಪ್ಪಳಿಸುತ್ತಾ ಬರುವಳು. ಜಯು ಶಾಂತು ಹಾಡುತ್ತಿರುವರು.)

ಜಯು, ಶಾಂತು— ಅತ್ತ ಇತ್ತ ಹಾರೆ ಪದ್ದಿ
ಮತ್ತೆ ಮತ್ತೆ ಹಾರೆ ಪದ್ದಿ
ಹಗ್ಗ ಕಾಲ್ಗೆ ತೊಡಕದಂತೆ
ಒಂದೇ ಸಮಕೆ ಹಾರೆ ಪೆದ್ದಿ
ಒಂದೂ ಎರಡು ಮೂರು ನಾಲ್ಕು
ಲಂಗಾವನ್ನು ಮೇಲಕ್ ಹಿಡಿಕೊ

ಒಂದೂ ಎರಡು ಮೂರು ನಾಲ್ಕು
ಎಷ್ಟ್ಸಲ ನೀನು ಕುಪ್ಪಳಿಸುತ್ತಿ
ಒಂದೂ ಎರಡು ಮೂರು ನಾಲ್ಕು
ಇಟ್ಕೊ ಲೆಕ್ಕ ನೀನು ಕೂಡ
ಒಂದೂ ಎರಡು ಮೂರು ನಾಲ್ಕು
ಐದು ಆರು ಏಳು ಎಂಟು

(ಪದ್ದು ಎಗರುತ್ತಾ ಬರುತ್ತಿರಲು ಹಗ್ಗ ಕಾಲಿಗೆ ತೊಡಕಿಕೊಂಡು ಮುಗ್ಗರಿಸುವಳು. ಅವಳು ಸೋತೆನೆಂದು ಹಗ್ಗವನ್ನು ಹಿಡಿದುಕೊಳ್ಳುವಳು. ಜಯು ಎಗರುವುದಕ್ಕೆ ಆರಂಭಿಸುವಳು. ಪದ್ದು ಶಾಂತು ಹಾಡುವರು.)

ಒಂದೂ ಎರಡು ಮೂರು ನಾಲ್ಕು
ಮನೇ ತುಂಬ ಹೆಣ್ಣುಮಕ್ಳು
ಒಬ್ಬೊಬ್ಬರಿಗು ಲಕ್ಷ ಹೊನ್ನು
ಅಪ್ಪನಿಗುಂಟು ಖರ್ಚು ಎನ್ನು
ಖರ್ಚಿಗೆ ಮಿಗಿಲು ಪ್ರೀತಿಯ ಗಂಟು
ಹುಡುಗರಿಗಿಂತ ಹೆಂಗಳೆ ನೆಂಟು
ಕಷ್ಟದೊಳುಂಟು ಹೆಣ್ಣಿನ ಕರಳು
ಮುಪ್ಪಿನ ಕಾಲದಿ ಮಗಳೆ ನೆರಳು

(ಅಷ್ಟರಲ್ಲಿ ಸಾತು ನಾಯಿಯನ್ನು ಹಿಡಿದುಕೊಂಡು ಅದರ ಸರಪಳಿಯನ್ನು ಆಡಿಸುತ್ತ ಹಾಡುತ್ತಾ ಬರುವಳು.)

ಸಾತು— ಬಾರೊ ಕೆಂಚ ಆಡೋಣ
ಕಣ್ಣಾಮುಚ್ಚಾಲಾಡೋಣ
ಲಚುಮಿ ಅಜ್ಜಿ ಕಾಣಪ್ಪ
ನೀನು ಅಲ್ಲಿರಬೇಕಪ್ಪ
ನಿನ್ನ ಕಣ್ಣ ಮುಚ್ಚುವಳು
ಪೊದೆಯಲಿ ನಾವು ಅಡಗುವೆವು

ಜೂಟು ಎಂದ್ಮೇಲೆ ಬರಬೇಕು
ಹುಡುಕಿ ನಮ್ಮನು ಹಿಡಿಬೇಕು

ಸಿಕ್ಕಿದ ಹಕ್ಕಿ ನಿನ್ನಂತೆ
ಮುಚ್ಚಿಸಿಕೊಳ್ಳುವುದು ಕಣ್ಣಂತೆ

ಮತ್ತೆ ಅವಿತುಕೊಳ್ಳೋಣ
ಮುಟ್ಟಲು ಬರಲಿ ಕಾಡೋಣ

ಬಾರೊ ಕೆಂಚ ಆಡೋಣ
ಕಣ್ಣಾಮುಚ್ಚಾಲಾಡೋಣ

ಲಚುಮಿ—ನೀವೆಲ್ಲಾ ಬಂದಿರಿ, ನಾಣಪ್ಪನೋರೆಲ್ಲಿ ?

ಸಾತು—ಆಮೇಲೆ ಬರುತೀನಿ ಅಂದ ಕಣೇ ಅವನು. ಅದಿರಲಿ ನೀನು ಯಾಕೆ ನಮ್ಮ ಮನೆಗೆ ಬರದೀರಾ ಇಲ್ಲಿಗೆ ಹೊರಟುಬಂದೆ ?

ಜಯು—ನಮ್ಮನ್ನೂ ಬಿಟ್ಟು ಮೊದಲೇ ಬಂದುಬಿಟ್ಟಿದಾಳೆ. ನಾವು ಪದ್ದೂ ಜೊತೆಯಲ್ಲಿ ಬಂದೆವು.

ಸಾತು—ಲಚುಮನ್ನ ನೋಡೋಣ ಅಂತಾ ಬಂದೇನು ಇಲ್ಲಿಗೇ ?

ಲಚುಮಿ—ಲಚುಮಯ್ಯ ಬಂದರಾ !

ಪದ್ದು—ನೋಡು, ಲಚುಮನ್ನ ಲಚುಮಯ್ಯ ಅಂತಾಳಲ್ಲಾ ಆಗಲೇ !

ಸಾತು—ಅಲ್ಲಾ ಪದ್ದೀನ ಪೆದ್ದಿ ಪೆದ್ದಿ ಅಂತಿದ್ವೆಲ್ಲಾ, ನೋಡು, ಅವಳಿಗೆ ಹೇಗೆ ತಿಳಿಯುತ್ತೆ.

ಲಚುಮಿ—ಲಚುಮಯ್ಯ ನಿಶ್ಚಯವಾಗಿಯೂ ಬಂದಿದ್ದಾರೇನಮ್ಮ ?

ಸಾತು—ನಮಗೆ ತಿಳೀದುಕಣೆ, ಲಚುಮಯ್ಯ ಹಿಂತಿರುಗಿ ಬಂದರೆ ನೀನು ಅವನನ್ನ ಮದುವೆ ಮಾಡಿಕೊಳ್ಳುತ್ತೀಯೇನೆ.

ಲಚುಮಿ—ಹೋಗರಿ ಅಮ್ಮ, ಬನ್ನಿ ಕಣ್ಣಾಮುಚ್ಚಾಲೆ ಆಡುವಿರಂತೆ.

ಸಾತು—ನೀನು ಅಜ್ಜಿ ಆಗಿರಬೇಕು ಕಣೆ. ಮೊದಲು ನಾಯಿ ಕಣ್ಣನ್ನ ಮುಚ್ಚೋದು. ಅದು ಯಾರನ್ನು ಮುಟ್ಟುತ್ತೆಯೋ ಅವರು ಕಣ್ಣು ಮುಚ್ಚಿಸಿಕೊಳ್ಳಬೇಕು. ಊಂ ರಡೀ ಪದ್ದು, ಜಯು, ಶಾಂತು ನಿಮ್ಮ ಹಗ್ಗದಾಟ ಸಾಕುಮಾಡಿ.

ಲಚುಮಿ—(ನಾಯಿಯ ಕಣ್ಣನ್ನು ಮುಚ್ಚಿ)

ಕಣ್ಣಾಮುಚ್ಚೇ
ಕಾಡಂಗೋಡಿ
ಉದ್ದಿನಮೂಟೆ
ಉರಳೇ ಹೋಯ್ತು
ನಮ್ಮ ಹಕ್ಕಿ ಬಿಟ್ಟೆನೋ
ಬಿಟ್ಟೆ
ನಿಮ್ಮ ಹಕ್ಕಿ ಮುಚ್ಚಿಕೊಳ್ಳಿರೋ
ಮುಚ್ಚಿಕೊಳ್ಳಿ

(ಎಲ್ಲರೂ ಪೊದೆಗಳ ಹಿಂದೆ ಹೋಗಿ ಅವಿತುಕೊಳ್ಳುವರು. ಶಾಂತಿಗೆ ಸರಿಯಾದ ಜಾಗ ಸಿಗದಿರಲು "ಅಂಬಾಲ್" "ಅಂಬಾಲ್" ಎಂದು ಕೂಗುತ್ತಾ ಓಡಾಡುತ್ತಿರುವಳು. ಜಾಗ ಸಿಕ್ಕಿದಮೇಲೆ "ಜೂಟ್" ಎನ್ನುವಳು. ಲಚುಮಿ ಮತ್ತೆ ಒಂದು ಸಲ "ಕಣ್ಣಾಮುಚ್ಚೆ ಕಾಡಂಗೋಡಿ" ಎಂದು ಹೇಳಿ ನಾಯಿಯನ್ನು ಬಿಡುವಳು. ಅಷ್ಟರಲ್ಲಿ ನಾಣಿ ಷರಟು ನಿಕ್ಕರು ಹಾಕಿಕೊಂಡು ತಲೆಗೊಂದು ಬಾಣಲಿ ಸಿಕ್ಕಿಸಿಕೊಂಡು ಕೈಗೆ ಎ. ಆರ್. ಪಿ. ಎಂದು ಬರೆದಿದ್ದ ಪಟ್ಟಿಯನ್ನು ಸುತ್ತಿಕೊಂಡು ಪ್ರವೇಶಿಸುವನು. ನಾಯಿ ಬೌ ಬೌ ಎಂದು ಬೊಗಳುತ್ತಾ ಅವನ ಹತ್ತಿರಕ್ಕೆ ಹೋಗುವುದು.)

ಲಚುಮಿ—ಏನು ನಾಣಪ್ಪನೋರೆ, ಏನಿದು ವೇಷ ನಿಮ್ಮದು?

ನಾಣಿ—ಏ, ನಾನು ಎ. ಆರ್. ಪಿ. ವಾಲಂಟಿಯರ್ ಕಣೆ.

ಶಾಂತು—ಹಾಗೆಂದರೆ ಏನೋ ನಾಣಿ.

ನಾಣಿ—ಹಾಗೆಂದರೆ ನಾನು....

ಸಾತು—ಹಾಗಂದರೆ ನಾನು ಹೇಳುತೀನಿ ಬಾರೆ—ಎ. ಎಂದರೆ ಎತ್ತರದಲ್ಲಿ; ಆರ್. ಹಾರಾಡುತಾ; ಪಿ. ಎಂದರೆ ಪೀಡಿಸುವುದಕ್ಕೆ ಬರುತ್ತಲ್ಲಾ ಏರೋಪ್ಲೇನು. ಅದು ಬಂದಾಗ ಎಚ್ಚರಿಕೆ ಕೊಡೋರಿವರು.

ಪದ್ದು—ಅಲ್ಲ ಕಾಣೆ ಎ. ಎಂದರೆ ಎಲ್ಲಾದರೂ ಇರಲಿ; ಆರ್. ಆರಾದರೂ ಆಗಲಿ; ಪಿ. ಪೀಡಿಸೇ ಪೀಡಿಸುತ್ತೇನೆ ಅಂತ ಬರುತ್ತಲ್ಲಾ ಶತ್ರುಗಳ ಏರೋಪ್ಲೇನು ಆಗ ನಮಗೆ ಎಚ್ಚರ ಕೊಡೋರಿವರು.

ನಾಣಿ—ಅಷ್ಟೇ ಅಲ್ಲ ಕಣೇ ನಾನು ಹೇಳುತೇನೆ ಕೇಳು. ನಾವು ಎ. ಆರ್. ಪಿ. ಅಂದರೆ, ಎ. ಎಂದರೆ ಏಟುಬಿದ್ದೋರ ಆರ್. ಎಂದರೆ ಆರೋಗ್ಯಕ್ಕೋಸ್ಕರ ಇರೋ ಪಿ. ಎಂದರೆ ಪಿಳ್ಳೆಗಳು ನಾವು.

ಜಯು—ಅಲ್ಲ ಎ. ಆರ್. ಪಿ. ಅಂದ್ರೆ ಅರ್ಧರಾತ್ರಿ ಪಿಶಾಚಿ ಅಂತ.

ಶಾಂತು—ಹಾಗೆನ್ನಬೇಡ ಕಣೆ, ನಾಣಿ ನೀನು, ಹೇಳಪ್ಪ ಎ. ಆರ್. ಪಿ. ಆದ ನೀವು ಅಲ್ಲಿ ಏನು ಮಾಡುತ್ತೀರಿ ?

ನಾಣಿ—ಎ. ಆರ್. ಪಿ. ಅಂಬೋದು ಇಂಗ್ಲೀಷು. ಹಾಗೆಂದರೆ ವಿಮಾನ ಧಾಳಿಯ ಕಾಲದಲ್ಲಿ ಎಚ್ಚರ ಕೊಡುವವರು ಅಂತ. ಏರೋಪ್ಲೇನು ಅಲ್ಲಿ ಬಂತು ಎಂದರೆ ಇಲ್ಲಿ ನಮಗೆ ಗೊತ್ತಾಗುತ್ತೆ. ನಮಗೆ ಗೊತ್ತಾದೊಡನೆ ನಾವು ಅಲಾರಂ ಕೊಡುತೇವೆ. ಒಟ್ಟಿಗೆ ಮಿರ್ಷಗಳೆಲ್ಲಾ ಕೂಗುತ್ತೆ. ನಾವು ವಿಷಲ್‌ಗಳನ್ನು ಹೀಗೆ ಊದುತ್ತೇವೆ. (ಊದಿ ತೋರಿಸುವನು) ಎಲ್ಲರಿಗೂ ಎಚ್ಚರಿಕೆ ಕೊಡುತೇವೆ. ಅದಕ್ಕೆ ನಾನೊಂದು ಹಾಡನ್ನ ಕಟ್ಟಿದ್ದೇನೆ.

ಜಯು, ಶಾಂತು—ಹೇಳೊ ನಾಣಿ, ಹೇಳೊ ಅದನ್ನ.

ನಾಣಿ—

ಎಚ್ಚರಿಕೆ—
ಎಚ್ಚರಿಕೆ

ಬರುತಿದೆ ಮೇಗಡೆ
ಶತ್ರುವಿಮಾನ
ಬಂದಿತು ಈದಿನ
ಊರಿಗೆ ಊನ
ಎಚ್ಚರಿಕೆ–ಎಚ್ಚರಿಕೆ

ಬಾಂಬು ಬಿದ್ದಿತೊ
ಮನೆ ಮಠ ಹಾಳು
ಸಿಡಿತಕೆ ಸಿಕ್ಕಲು
ದೇಹವು ಚೂರು
ಎಚ್ಚರಿಕೆ–ಎಚ್ಚರಿಕೆ

ಹೆಂಗಸು ಮಕ್ಕಳು
ಮನೆಯೊಳಗಡಗಿ
ಬೀದಿಯ ಜನರೇ
ಹಳ್ಳದೊಳುಡಗಿ
ಎಚ್ಚರಿಕೆ–ಎಚ್ಚರಿಕೆ

ಧಾಳಿ ಮುಗಿಯಲು
ಬರುವೆವು ನಾವು
ಗಾಯಗೊಂಡವರಿಗೆ
ಮಾಡಲಿಲಾಜು
ಎಚ್ಚರಿಕೆ–ಎಚ್ಚರಿಕೆ

ಬೆಂಕಿಯನಾರಿಸೆ
ಪಂಪುಗಳುಂಟು
ಗಾಯವ ಮಾಗಿಸೆ
ಔಷಧಿಯುಂಟು
ಎಚ್ಚರಿಕೆ–ಎಚ್ಚರಿಕೆ

ಸೇವೆಗೆ ಸಿದ್ಧರು
ನಾವುಗಳು
ಎ. ಆರ್. ಪಿ. ಪಡೆ
ಸೇವಕರು
ಎಚ್ಚರಿಕೆ–ಎಚ್ಚರಿಕೆ

(ಹಾಡನ್ನು ಹೇಳಿದ ಮೇಲೆ ವಿಷಲ್ ಊದುವನು)

ಊಂ ಇದು ಸಿಗ್ನಲ್. ಪಾರ್ಕಿನಲ್ಲಿರೋ ನೀವುಗಳೆಲ್ಲಾ ಹಳ್ಳದಲ್ಲಿ ಅವಿತುಕೊಳ್ಳಿ.

(ಏರೋಪ್ಲೇನು ಬರುತ್ತಿರುವಹಾಗೆ ಶಬ್ದಮಾಡಿ ಬಾಂಬುಗಳನ್ನು ಎಸೆದಹಾಗೆ ಶಬ್ದ ಬರಲು ಕಲ್ಲನ್ನು ಕೆರೆಯೊಳಕ್ಕೆ ಎಸೆಯುವನು. ಶಬ್ದವಾಗುವುದು. ಸ್ವಲ್ಪ ಹೊತ್ತಿನ ಮೇಲೆ ವಿಮಾನಗಳೆಲ್ಲಾ ಹೊರಟುಹೋದಹಾಗೆ ಶಬ್ದ ಮಾಡುವನು.

ಆಮೇಲೆ ಎಲ್ಲರನ್ನೂ ಹೊರಕ್ಕೆ ಬನ್ನಿ ಎಂದು ಕರೆಯುವನು. ಶಾಂತು ಕುಂಟುತ್ತಾ ಬರುವಳು.)

ಬನ್ನಿ ಶಾಂತಿಗೆ ಫಸ್ಟ್ ಐಡ್ ಮಾಡಬೇಕು.

(ಇವನ್ನೆಲ್ಲಾ ನೋಡುತ್ತಾ ಯೋಚನೆಯಲ್ಲಿ ಸಿಲುಕಿ ನಿಂತಿರುವ ಲಚುಮಿಯ ಹಿಂದೆ ಹೋಗಿ ಅವಳ ಸೀರೆಯ ಸೆರಗನ್ನು ಹರಿದುತಂದು ಡ್ರಸ್ಸು ಮಾಡುವನು.)

ಸಾತು—ಲಚುಮಿ ಸೀರೇನೆ ಯಾಕೋ ಹರಿದೆ. ಲಚುಮಿ, ನಿನಗೆ ಗೊತ್ತಾಗಲಿಲ್ಲವೇನೇ? ಏನು ಯೋಚನೆ ಮಾಡುತ್ತಾ ನಿಂತಿದ್ದಿ?

ಲಚುಮಿ—ಇಲ್ಲೇ ಹೀಗೆ ಬಾಂಬು ಬಿದ್ದ ಪೆಟ್ಟಿಗೆ ಆಗೋ ಹಾಗಿದ್ದರೆ ಯುದ್ಧಭೂಮಿಯಲ್ಲಿ ಇರೋರ ಪಾಡೇನಮ್ಮ!

ಸಾತು—ಲಚುಮೀಗೆ ಬಂತು ಲಚುಮನ ಯೋಚನೆ.

ನಾಣಿ—ಈ ಯುದ್ಧದಲ್ಲಿ ಸೈನಿಕರನ್ನೆ ಸಾಯಿಸುತ್ತಾರೆ ಎಂಬೋದಿಲ್ಲಕಣೆ ಎಲ್ಲರೂ ಸಾಯುತಾರೆ.

ಜಯ, ಶಾಂತು—ಬಿಡಿತು ಬಿಡಿತು ಎನ್ನು. ಹಾಗೆ ಅನಿಷ್ಟ ನುಡಿಯ ಬೇಡ.

(ಹಿಂದೆ ಎ. ಆರ್. ಪಿ. ವಾಸಿನಲ್ಲಿ ಮಧ್ಯಮಾವತಿ ರಾಗದಲ್ಲಿ ಹಾಡುತ್ತಿರುವುದು ಕೇಳುವುದು)

ಶಾಂತಿಯ ತಾ ಇಳೆಗಮ್ಮಯ್ಯ
ಕದನದ ಕ್ರಾಂತಿಯ ತೊಳಗಿಸೆ ಅಮ್ಮಯ್ಯ.

(ಎಲ್ಲರೂ ಆಕಡೆ ಹೋಗುವರು)

ಲಚುಮಿ—ಎಂದು ಈ ಯುದ್ಧ ಮುಗಿಯುತ್ತೋ? ಯಾವಾಗ ಲಚುಮಯ್ಯ ಹಿಂತಿರುಗುತ್ತಾನೋ? ದೇವರೇ ನೀನವನ್ನ ಕಾಪಾಡಬೇಕು. ನಿನ್ನನ್ನೇ ನಂಬಿದ್ದೇನೆ.

(ತೆರಳುವಳು, ತೆರೆ ಬೀಳುವುದು)

## ಎರಡನೆಯ ದೃಶ್ಯ

[ಮಕ್ಕಳೆಲ್ಲರೂ ಪಾರ್ಕಿನಲ್ಲಿ ಕಲೆತಿದ್ದಾರೆ. ಪಾರ್ಕಿನಲ್ಲಿ ಕೋಲಾಹಲ. ಎಲ್ಲೆಲ್ಲೂ ಕೋಲಾಹಲವಿರುವ ಹಾಗಿದೆ. ಯುದ್ಧ ಮುಗಿದಿದೆ. ಸೈನಿಕರೆಲ್ಲರೂ ಹಿಂತಿರುಗುತ್ತಿದ್ದಾರೆ. ಭಾರತಕ್ಕೆ ಸ್ವಾತಂತ್ರ್ಯ ಒದಗಿದ ಚಿಹ್ನೆ ಕಾಣುತ್ತಿದೆ. ಅದು ಬಾಣ ಬಿರಿಸುಗಳಿಂದ ವ್ಯಕ್ತವಾಗುತ್ತಿದೆ. ಪಾರ್ಕಿನ ಒಂದೊಂದು ಕಡೆಯೂ ಒಂದೊಂದು ವಿಧದ ಆಟಪಾಟಗಳು ನಡೆಯುತ್ತಿರುವ ಹಾಗಿದೆ. ಬ್ಯಾಂಡಿನ ಆಡಂಬರ, ನಾಗಸ್ವರದ ಇಂಚರ, ಭಜನಾಕೂಟಗಳ ಹಾಡಿನ ದನಿ. ಹೆಣ್ಣುಮಕ್ಕಳ ಪ್ರಭಾತ ಬೇರಿ, ರಾಷ್ಟ್ರಗೀತೆ, ಇಷ್ಟೂ ಹಿಮ್ಮೇಳವಾಗಿ ನಡೆಯುತ್ತಿವೆ. ಪರದೆ ಮೇಲಕ್ಕೆ ಎದ್ದಾಗ ಹೊಂಗೆಯ ಮರದಡಿ ಕೋಲನ್ನು ನೆಟ್ಟು ಅದಕ್ಕೆ ಸೈನಿಕನ ಉಡುಪನ್ನು ಹಾಕಿರುವಂತೆ ಕಾಣುವುದು. ಗಿಡಗಳ ರೆಂಬೆಗಳಮೇಲೆಲ್ಲಾ ನಾಡಿನ ಬಾವುಟಗಳು ಕಟ್ಟಿವೆ. ಲಚುಮಿ ಮಕ್ಕಳ ಕೈಯಲ್ಲಿ ಕೋಲಾಟ ಹಾಕಿಸುತ್ತಿರುವಳು. ಮಕ್ಕಳು ಸೈನಿಕನ ಬೊಂಬೆಯ ಸುತ್ತಲೂ ತಿರುಗುತ್ತಾ ಕೋಲನ್ನು ಹುಯ್ಯುತ್ತಾ ಹಾಡುತ್ತಿರುವರು.]

ಲಚುಮಯ್ಯ ನಾಯಕ
ಕುದುರೆಯೇರಿ ಬಂದಾನೊ
ಕುದುರೆಯನೇರಿ ಬಂದಾನೊ
ನಾಡನು ಸುತ್ತಿ ಬಂದಾನೊ
ನಾಡನು ಸುತ್ತಿ ಬಂದಾನೊ
ನಾರಿಯ ಬಳಿಯೊಳು ನಿಂದಾನೊ
ನಾರಿಯ ಬಳಿಯೊಳು ನಿಂದಾನೊ
ನೀರೆಯ ಮೋಹಿಸಿ ನಿಂದಾನೊ

ಲಚುಮಯ್ಯ ನಾಯಕ
ಊರ ಕಟ್ಟಿ ಬಂದಾನೊ
ಊರನು ಕಟ್ಟಿಸಿ ಬಂದಾನೊ
ಗುಡಿಯನು ಕಟ್ಟಿಸಿ ಬಂದಾನೊ
ಗುಡಿಯನು ಕಟ್ಟಿಸಿ ಬಂದಾನೊ
ದೇವರ ನಿಲ್ಲಿಸಿ ಬಂದಾನೊ
ದೇವರ ನಿಲ್ಲಿಸಿ ಬಂದಾನೊ
ಪೂಜೆಯ ಸಲ್ಲಿಸಿ ಬಂದಾನೊ

ಲಚುಮಯ್ಯ ನಾಯಕ
ಕೆರೆಯ ಕಟ್ಟಿ ಬಂದಾನೊ
ಕೆರೆಯನು ಕಟ್ಟಿಸಿ ಬಂದಾನೊ
ಕಾಲುವೆ ತೋಡಿಸಿ ಬಂದಾನೊ
ಕಾಲುವೆ ತೋಡಿಸಿ ಬಂದಾನೊ
ನೀರನು ಹಾಯಿಸಿ ಬಂದಾನೊ
ನೀರನು ಹಾಯಿಸಿ ಬಂದಾನೊ
ಒಕ್ಕಲ ಪ್ರೀತಿಯ ತಂದಾನೊ

ಲಚುಮಯ್ಯ ನಾಯಕ
ಕೋಟೆ ಕಟ್ಟಿ ಬಂದಾನೊ
ಕೊಟೆಯ ಕಟ್ಟಿಸಿ ಬಂದಾನೊ
ಬಾವುಟ ನೆಡಸಿ ಬಂದಾನೊ
ಬಾವುಟ ನೆಡಸಿ ಬಂದಾನೊ
ರಾಜ್ಯವ ಸ್ಥಾಪಿಸಿ ಬಂದಾನೊ
ರಾಜ್ಯವ ಸ್ಥಾಪಿಸಿ ಬಂದಾನೊ
ರಾಣಿಯ ಹುಡುಕುತ ಬಂದಾನೊ—

ರಾಣಿಯ ನಿಲ್ಲಿ ಕಂಡಾನೊ

(ಕೋಲಾಟ ಮುಗಿಯುವ ಹೊತ್ತಿಗೆ ನಾಣಿ ಅವರ ಸ್ಕೂಲಿನಲ್ಲಿ ಹೇಳಿಕೊಟ್ಟ ಪದ್ಯವನ್ನು ರಾಗವಾಗಿ ಹೇಳುತ್ತಾ ಪ್ರವೇಶಿಸುವನು.)

ನಾಣಿ— ಹೆರರ ತುಳಿತಕೆ ಸಿಕ್ಕಿ
ಸೊರಗಿದ್ದಳೀ ತಾಯಿ
ವರದ ಭಾರತ ಮಾತೆ ಪುಣ್ಯಜಾತೆ
ಹೆರರ ದಾಸ್ಯದ ಹಂಗು
ಹರಿದಿರಲು ನೋಡಿಂದು
ಹರುಷದಲಿ ಮಕ್ಕಳನು ಹರಸುತಿಹಳು

ಸ್ವಾತಂತ್ರ್ಯ ಸಂಪದವ
ತಂದುಕೊಟ್ಟರು ಸುತರು
ಕದನದಲಿ ಕಾದಾಡಿ ದುಡಿದು ಮಡಿದು
ಭಾರತದ ಈ ಜನಕೆ
ಇಂದು ದೊರಕಿತು ನೋಡ
ಇಳೆಯ ಜನರೊಳಗೊಂದು ಗಣ್ಯಸ್ಥಾನ
ಭಾರತದ ಕುವರರಿಗೆ
ಶೂರಾಧಿ ಶೂರರಿಗೆ
ಮಡಿದ ಆ ಯೋಧರಿಗೆ ನಮಿಸುತಿಹೆವು
ರಣರಂಗದಿಂದ ಹಿಂ
ತಿರುಗಿ ಬಂದಿಹ ವೀರ
ಸೈನಿಕರೆ ಸ್ವಾಗತವ ಬಯಸುತಿಹೆವು

ಜಯು—ನಾಣಿ ಸ್ಕೂಲಿಗೆ ಸೇರಿ ಆಗಲೆ ಆರು ತಿಂಗಳಾಗಲಿಲ್ಲ, ಆಗಲೆ ಎಷ್ಟು ಕಲಿತಿದ್ದಾನೆ!

ಸಾತು—ಅವನು ಹೊಗೋದು ಕನ್ನಡಸ್ಕೂಲಿಗೆ. ಬೆಂಗಳೂರುಸಿಟಿಲಿರೋ ಸ್ಕೂಲಿಗೆ. ಅದರಿಂದಲೇ ಅಷ್ಟೊಂದು ಕಲಿತುಕೊಳ್ಳೋದಕ್ಕಾಗಿದೆ.

ಪದ್ದಿ—ನಾಣಿ ಏನಿತ್ತೊ ನಿಮ್ಮ ಸ್ಕೂಲಿನಲ್ಲಿ ಇವತ್ತು ?

ನಾಣಿ—ಇನ್ನೆರಡು ದಿವಸಕ್ಕೆ ನಮ್ಮ ಸ್ಕೂಲಿನಲ್ಲಿ ಈಗ ಹಿಂತಿರುಗಿರೋ ಸೈನ್ಯದೋರಿಗೆಲ್ಲಾ ಟೀ ಕೊಡುತೀವಿ. ಆಗ ನಾವು ಆಡೋ ನಾಟಕ ಪ್ರಾಕ್ಟೀಸು ಮಾಡುತಿದ್ದೆವು. ಆಗ ನಾನು ಹೇಳಬೇಕಾದ ಸ್ವಾಗತ ಗೀತೆ ಈಗ ಇಲ್ಲಿ ಹೇಳಿದ್ದು.

ಶಾಂತು—ಓ ಹಾಗಾದರೆ ಲಚುಮ ಈಗ ಹಿಂತಿರುಗಿ ಬರುತಾನೆ. ಲಚುಮಿ, ಲಚುಮ ಬರುತ್ತಾನೆ!

(ಅಷ್ಟರಲ್ಲಿ ಶ್ರೀನಿವಾಸರಾಯರೂ ಅವರ ಪತ್ನಿಯವರೂ ಪ್ರವೇಶಿಸುವರು. "ಓ ಅಮ್ಮ ಅಪ್ಪ ಬಂದರು" ಎಂದು ಹುಡುಗರು ಅವರೆಡೆಗೆ ಓಡಿಹೋಗುವರು.)

ಶ್ರೀನಿವಾಸರಾಯ—ಏನೆ ಅದು ಅಲ್ಲಿ ಕಟ್ಟಿರೋದು! ಯಾರ ಮೂರ್ತಿ ಅದು!

ಶಾಂತು—ನಮ್ಮ ಲಚುಮು ಅವನು.

ಶ್ರೀನಿವಾಸರಾಯ—ಯಾವ ಲಚುಮು!

ಪದ್ದು—ನಮ್ಮ ಮನೇಲಿರಲಿಲ್ಲವೇನಣ್ಣ, ಆ ಲಚುಮು.

ಸಾತು—ಲಚುಮುನ್ನ ಮರೆತುಬಿಟ್ಟೇನಣ್ಣ ಆಗಲೇ.

ಶ್ರೀನಿವಾಸರಾಯರ ಹೆಂಡತಿ—ಆವತ್ತೀಪಾರ್ಕಿನಲ್ಲಿ ಲಚುಮಿ ಜೊತೇಗೆ ಆಟ ಆಡುತ್ತಿದ್ದ. ಆಗ ನಮ್ಮ ಕಿಟ್ಟು ನೀರಿಗೆ ಬಿದ್ದುಬಿಡುತ್ತಿದ್ದ. ಆಗ ನಾವು ಅವನನ್ನ ಮನೇಬಿಟ್ಟು ಓಡಿಸಲಿಲ್ಲವೇ. ಆಮೇಲೆ ಅವನನ್ನ ಪುನಃ ಇಟ್ಟುಕೊಳ್ಳೋಣ ಅಂತ ನಾನು ಹೇಳಿದೆ. ನೀವು ಒಪ್ಪಲಿಲ್ಲ.

ಶ್ರೀನಿವಾಸರಾಯ—ಈಗ ಅವನು ಎಲ್ಲಿದ್ದಾನೆ?

ಪದ್ದು—ಅವನು ಸಿಪಾಯಿಯಾಗಿ ಹೋಗಿದ್ದಾನೆ.

ಶ್ರೀನಿವಾಸರಾಯ—ಅಯ್ಯೋ ಪಾಪ ಸಿಪಾಯಿಯಾಗಿ ಸೈನ್ಯಕ್ಕೆ ಸೇರಿ ಬಿಟ್ಟನೇ. ಅದರಿಂದಲೇ ಆಮೇಲೆ ಎಲ್ಲೂ ಕಾಣಿಸಲಿಲ್ಲ.

ಶ್ರೀನಿವಾಸರಾಯರ ಹೆಂಡತಿ—ಅಯ್ಯೋ ಈ ಹುಡುಗರನ್ನ ನೋಡಿ ಅಂದ್ರೆ ಅವನನ್ನ ಇನ್ನೂ ಮರತಿಲ್ಲ! ಅವನು ಸೈನ್ಯಕ್ಕೆ ಸೇರಿದ್ದು ನಿಮಗೆ ಹೇಗೆ ಗೊತ್ತಾಯಿತು?

ನಾಣಿ—ನಮ್ಮನೆ ಬಿಡಿಸಿಬಿಟ್ಟಮೇಲೆ ದಿನಾಗಲೂ ನಮ್ಮನ್ನ ನೋಡೋದಕ್ಕೆ ಸಂಜೆಹೊತ್ತು ಇಲ್ಲಿಗೆ ಬರುತ್ತಿದ್ದ.

ಪದ್ದು—ಬಂದು ನಮಗೆ ಕೋಲಾಟದ ಪದ ಎಲ್ಲಾ ಹೇಳಿಕೊಡುತ್ತಿದ್ದ.

ಶಾಂತು—ಕತೆಗಳನ್ನ ಹೇಳುತ್ತಿದ್ದ.

ಶ್ರೀನಿವಾಸರಾಯ—ಆಮೇಲೆ?

ಸಾತು—ನಮ್ಮ ಮನೆ ಬಿಟ್ಟಮೇಲೆ ಎಲ್ಲೆಲ್ಲೋ ಕೆಲಸಕ್ಕೋಸ್ಕರ ಅಲೆದನಂತೆ. ಸಿಕ್ಕಲಿಲ್ಲ. ನಮ್ಮ ಲಚುಮಿ ಅವನಿಗೆ ಇಲ್ಲಿ ಮುಸರೆ ಅನ್ನ ತಂದುಕೊಡುತ್ತಿದ್ದಳು. ಅದೇ ಅವನಿಗೆ ಊಟ. ಕೊನೆಗೆ ಸೈನ್ಯಕ್ಕೆ ಸೇರಿಬಿಟ್ಟ. ಹೊರಟುಹೋಗೋವಾಗ ಇಲ್ಲಿಗೆ ಬಂದಿದ್ದ. ನಮಗೆಲ್ಲಾ ಕವಾತುಮಾಡಿಸಿ ಲಚುಮಿಗೆ ಕಾಗದ ಕೊಟ್ಟು ಹೊರಟುಹೋದ.

ಶ್ರೀನಿವಾಸರಾಯರ ಹೆಂಡತಿ—ಏನು ಕಾಗದವಾನೇ ಅದು?

ಲಚುಮಿ—ಅದೇನೋ ಅವನಿಗೂ ಸರ್ಕಾರಕ್ಕೂ ಒಪ್ಪಂದದ ಕಾಗದ ಅಂತೆ. ಅದೇನೋ ಮನೇಯವರಿಗೆ ದುಡ್ಡು ಕೊಡೋದಂತೆ.

ಶ್ರೀನಿವಾಸರಾಯರ ಹೆಂಡತಿ—ಏನುಮಾಡಿದೆ ಆ ಕಾಗದಾನ?

ಲಚುಮಿ—ನಮ್ಮ ಅಮ್ಮಾವರ ಕೈಗೆ ಕೊಟ್ಟದ್ದೀನಿ.

ಶ್ರೀನಿವಾಸರಾಯರ ಹೆಂಡತಿ—ಆಮೇಲೆ ಅವನಿಂದ ಕಾಗದ ಇಲ್ಲವೇ?

ಲಚುಮಿ—ಅವರಿಂದ ಒಂದು ಕಾಗದಾನೂ ಇಲ್ಲಮ್ಮ. ಸರ್ಕಾರದಿಂದ ದುಡ್ಡೇನೊ ಪ್ರತಿ ತಿಂಗಳೂ ಬರುತ್ತಿತ್ತು. ಎಲ್ಲಾ ನಮ್ಮ ಅಮ್ಮಾವರು ಒಟ್ಟುಗೂಡಿಸಿಟ್ಟಿದ್ದಾರೆ.

ಸಾತು—ಅವನು ಹಿಂತಿರುಗಿದಮೇಲೆ ಲಚುಮೀನ ಮದುವೆ ಮಾಡಿ ಕೊಳ್ಳುತಾನೆ.

ಶ್ರೀನಿವಾಸರಾಯರ ಹೆಂಡತಿ—ಹೌದೇನೆ?

ಲಚುಮಿ—(ಸುಮ್ಮನಿರುವಳು)

ಶ್ರೀನಿವಾಸರಾಯ—ಹಿಂತಿರುಗಲಿ. ಅವನನ್ನ ಇನ್ನು ನಮ್ಮ ಮನೇಲೇ ಇಟ್ಟುಕೊಂಡುಬಿಡುವುದು. ಮಕ್ಕಳಿಗೆ ಅವನಮೇಲೆ ಇಷ್ಟೊಂದು ಪ್ರೀತಿ ಇದೆ.

ಜಯು, ಶಾಂತು—ಅವನನ್ನ ನಮ್ಮ ಮನೇಲಿ ಇಟ್ಟುಕೊಂಡುಬಿಡು ತ್ತೇವೆ. ಅಮ್ಮ ಹಾಗೆಂದಿದ್ದಾಳೆ.

ಪದ್ದು—ಅವನು ಬಂದರೆ ನಮ್ಮ ನಿಮ್ಮ ಮನೆ ಜವಾನನಾಗಿರು ತ್ತಾನೇನು? ಅವನು ಸರಧಾರನಾಗಿ ಬರುತ್ತಾನೆ. ಅವನೇ ಜವಾನ ರನ್ನ ಇಟ್ಟುಕೊಳ್ಳುತ್ತಾನೆ. ಅಲ್ಲವೇನೋ ನಾಣಿ.

ನಾಣಿ—ಹೌದು ನಾಳೆ ಅವರನ್ನ ಸ್ಕೂಲಿಗೆ ಬರಮಾಡಿಕೊಳ್ಳುತೀವಿ. ನಾಳೆ ಎಲ್ಲರೂ ಬರುತ್ತಾರೆ. ನಾನು ಸ್ವಾಗತಪದ್ಯ ಹೇಳುತೀನಿ. ನಾಟಕ ಆಡುತೇವಿ.

ಶ್ರೀನಿವಾಸರಾಯ—ನಿನ್ನೇನೇ ಎಲ್ಲರೂ ಬಂದುಬಿಟ್ಟರಲ್ಲಾ. ನಮ್ಮ ಸೈನ್ಯದೋರೆಲ್ಲಾ ಹಿಂತಿರುಗಿದ್ದಾರೆ.

ಶ್ರೀನಿವಾಸರಾಯರ ಹೆಂಡತಿ—ಅದನ್ನಾದರೂ ನಿನಗೆ ಬರೀಲಿಲ್ಲವೇನೇ.

ಲಚುಮಿ—(ಚಿಂತೆ ತಲೆದೋರಿಬಿಟ್ಟರಲು) ಇಲ್ಲಕಾಣಮ್ಮ.

ಶ್ರೀನಿವಾಸರಾಯರ ಹೆಂಡತಿ—(ಗಂಡನನ್ನು ಕುರಿತು) ನೀವು ಆಫೀಸಿನಲ್ಲಿ ವಿಚಾರಿಸಿ ಎಂದರೇ.

ಶ್ರೀನಿವಾಸರಾಯ—ನಾಳೆ ವಿಚಾರಿಸುತ್ತೇನೆ. ಊಂ ಇನ್ನು ನಾವು ಹೋಗೋಣ.

(ಹುಡುಗರಿಗೆಲ್ಲರಿಗೂ ಬುಟ್ಟಿಯಲ್ಲಿ ತಂದಿದ್ದ ಹಣ್ಣುಗಳನ್ನು ಕೊಟ್ಟು ತೆರಳುವರು. ಲಚುಮಿ ಚಿಂತಾಕ್ರಾಂತಳಾಗಿ ಲಚುಮನ ವಿಗ್ರಹದ ಕೆಳಗೆ ಕುಳಿತುಬಿಟ್ಟಿರುವಳು.)

ಸಾತು—ಲಚುಮಿ ಏನೋ ಯೋಚನೇಲಿ ಇದ್ದಾಳೆ. ನಾನು ಹಂಚಿ ಕೊಡುತ್ತೀನಿ ಬನ್ನಿ.

(ಹಣ್ಣುಗಳನ್ನು ಹೆಚ್ಚಿ ಪಾಲುಮಾಡುತ್ತಿರುವಳು. ಹುಡುಗಿಯರೆಲ್ಲರೂ ಅವಳ ಸುತ್ತಲೂ ಕುಳಿತಿರುವರು. ನಾಣಿ ಅಕಡೆ ಈಕಡೆ ಓಡಾಡುತ್ತಿದ್ದು ದೂರದಲ್ಲಿ ಕುಂಟನೊಬ್ಬನು ನಿಂತಿರುವುದನ್ನು ಕಂಡು ಕೋಲೊಂದು ಮುರಿದು ಕಂಕಳಿಗೆ ಊರಿಕೊಂಡು ಕುಂಟುತ್ತಾ ಅಣಕಿಸಿಕೊಂಡು ಹಾಡುತ್ತಾ ಬರುವನು.)

ನಾಣಿ—

ಕುಂಟನಾದೆನಮ್ಮ, ನನ್ನ
ಸೊಂಟ ಮುರಿಯಿತಮ್ಮ
ನೆಂಟರಿಷ್ಟರಮ್ಮ, ಬಡವರಿ
ಗುಂಟು ನೀವೆ ಅಮ್ಮ
ಕಾಸನೀಡಿರಮ್ಮ, ಹಸಿವಿನ
ತ್ರಾಸ ತಡೆಯೆನಮ್ಮ
ಈಶ ಪೊರೆವ ನಿಮ್ಮ, ಕೊಡಗೈ
ವ್ಯರ್ಥವಾಗದಮ್ಮ

ಪದ್ದು—ನೋಡೇ ಅಲ್ಲಿ. ನಾಣಿ ಪಾರ್ಟು ಮಾಡುತ್ತಿದಾನೆ.

ಜಯು—ಅಯ್ಯೋ ಅಲ್ನೋಡೆ ಅಲ್ಲಿ. ಕುಂಟ ಒಬ್ಬ ಇದ್ದಾನೆ. ಅವನನ್ನ ಇವನು ಅಣಕಿಸುತ್ತಿದ್ದಾನೆ.

ಶಾಂತು—ಸಾತು, ಎರಡು ಹೋಳು ಕೊಡೇ ಪಾಪ ಆ ಕುಂಟನಿಗೆ ಹಾಕಿ ಬರುತ್ತೇನೆ. (ಹಣ್ಣಿನ ಹೋಳುಗಳನ್ನು ತೆಗೆದುಕೊಂಡು ಹೋಗುವಳು.)

ಜಯು—ಬೇಗಬೇಗ ಹೋಗೆ. ಹೊರಟುಹೋಗುತ್ತಿದಾನೆಕಣೆ. ಯಾಕೊ ಹಾಗೆ ಹೊರಟುಹೋಗುತ್ತಿದ್ದಾನೆ ಓಡಿಹೋಗೆ. (ಶಾಂತು ಓಡುವಳು)

ಶಾಂತು—(ಅಲ್ಲಿಂದ) ಲಚುಮ ಇವನು !

ಹುಡುಗಿಯರೂ ನಾಣಿ—ಆಂ....(ಆಕಡೆ ಓಡುವರು)

ಲಚುಮಿ—ಬಂದರಲ್ಲಾ ಹಿಂತಿರುಗಿ. ದೇವರು ದಯಾಳು.

(ಹುಡುಗಿಯರು ಲಚುಮನೊಂದಿಗೆ ಹಿಂತಿರುಗುವರು. ಲಚುಮ ಒಳ್ಳೆ ಡ್ರಸ್ಸಿನಲ್ಲಿರುವನು. ಮೆಡಲುಗಳೆಲ್ಲಾ ಇರುವವು. ಆದರೆ ಒಂದು ಕಾಲು ಮುರಿದಿರುವುದು. ಕಂಕಳುಗಳಿಗೆ ಮರದ ಊರುಗೋಲುಗಳನ್ನು ಸಿಕ್ಕಿಸಿಕೊಂಡು ನಡೆದು ಬರುತ್ತಿರುವನು.)

ನಾಣಿ—ನಿನ್ನೇನೆ ಬಂದೋನು ನೇರಾಗಿ ಮನೆಗೆ ಯಾಕೆ ಬರಲಿಲ್ಲ ?

ಲಚುಮ—ಕುಂಟನಾಗಿ ಹೇಗೆ ಲಚುಮಿಗೆ ಮುಖ ತೋರಿಸಲಿ ಅಂತ. ಇವತ್ತು ಬಂದು ದೂರದಿಂದ ನಿಮ್ಮನ್ನು ನೋಡಿ ಹೊರಟು ಹೋಗೋಣ ಅಂತಿದ್ದೆ. ಈಗ ನನಗೆ ಪೆನ್‌ಷನ್ ಕೊಟ್ಟಿದ್ದಾರೆ. ಯಾವದಾದರೂ ಹಳ್ಳಿಗೆ ಹೋಗಿಬಿಡಬೇಕೆಂದಿದ್ದೆ. ಆದರಿಂದಲೇ ಆಗಲೆ ಬಂದು ಮರದಡಿ ಇದ್ದೆ. ರಾಯರು ಬಂದಿದ್ದು ನೋಡಿದೆ.

ಸಾತು—ನಮ್ಮನ್ನು ಬಿಟ್ಟು ಎಲ್ಲಿಗೆ ನೀನು ಹೊರಟುಹೋಗುತೀಯಾ ನೋಡುತೀವಿ.

ಲಚುಮಿ—(ಎದ್ದು ತಲೆಬಾಗಿ ನಿಲ್ಲುವಳು. ಏನೋ ನುಡಿಯುತ್ತಿದ್ದಹಾಗೆ ಕೇಳುವುದು.)

ಲಚುಮ—ಲಚುಮಿ, ನನ್ನ ನೋಡಿ ನಿಂಗೆ ಏನೆನಸುತ್ತೆ ? ಏನೋ ನುಡೀತಿದ್ದಹಂಗಾಯ್ತು.

ಲಚುಮಿ—ದೇವರು ದೊಡ್ಡವನು ಅಂತಿದ್ದೆ. ಕಾಲು ಮುರಿದರೇನಾಯ್ತು ನಂದು ಎರಡು ಕಾಲಿವೆ. ಅಲ್ಲ....ನೀವು ಹಿಂತಿರುಗಿ ಬರುತ್ತಿದ್ದರೋ ಇಲ್ಲವೊ....ಎಲ್ಲಾ ಸರಿಯಾಗಿದ್ದಿದ್ದರೆ !

ಲಚುಮ—ಇದೇ ಹೆಂಗಸು ಎಂಬೋದು.

ಸಾತು—ಲಚುಮಯ್ಯ ಲಚುಮಿ ಮಾತಿಗೆ ಹತ್ತಿದರು. ಮಾತಾಡುತ್ತಿರಲಿ ಅಣ್ಣನಿಗೆ ಹೋಗಿ ಹೇಳಿಬರೋಣ. ಅಣ್ಣ ಅಮ್ಮ ಇಲ್ಲೇ ಹೋಗುತಿರಬೇಕು. ಅಣ್ಣ ಇನ್ನುಮೇಲೆ ನೀನು ನಮ್ಮ ಮನೇಲೆ ಇರಬೇಕೆಂದಿದ್ದಾರೆ.

ಜಯು, ಶಾಂತು—ನಮ್ಮ ಮನೇಗಿರಬೇಕಪ್ಪ. ಅಮ್ಮ ಹಾಗೆಂದಿದ್ದಾರೆ.

ಲಚುಮ—ಇಬ್ಬರ ಮನೇಲೂ ಇರುತೀನಿ.

ಎಲ್ಲರೂ—ಸರಿ.

ನಾಣಿ—ನಾ ಹೋಗಿ ಅಣ್ಣನಿಗೆ ಹೇಳಿಬಿಟ್ಟು ಬರುತೀನಿ. (ಹೊರಡುವನು. ಸಾತು ಏನೋ ಸನ್ನೆ ಮಾಡುವಳು. ಹುಡುಗರೂ ಆಕಡೆಗೆ ಹೋಗುವರು. ನಾಣಿ ಮತ್ತೆ ಹಿಂತಿರುಗಿ ಬಂದು ಲಚುಮನನ್ನು ಬೊಂಬೆ ಕೆಳಗೆ ಕೂಡಿಸಿ ಅವನ ಹತ್ತಿರ ಲಚುಮಿಯನ್ನು ಕುಳಿತುಕೊಳ್ಳಲು ಹೇಳುವನು. ನಾಯಿ ಅವರಿಬ್ಬರ ಕಾಲಬಳಿ ಬಂದು ಮಲಗಿಕೊಳ್ಳುವುದು.)

ಅಣ್ಣ ಅಮ್ಮ ಬಹಳ ದೂರ ಹೋಗಿಬಿಟ್ಟಿದ್ದಾರೆ. ಹೇಳಿಬಿಟ್ಟು ಬರುತ್ತೀನಿ ನೀವಿಲ್ಲೆ ಮಾತನಾಡುತ್ತಿರಿ ನಾನು ಈಗಲೇ ಬರುತ್ತೇನೆ. (ಹೊರಟುಹೋಗುವನು.)

ಲಚುಮ—(ಬೊಂಬೆಯನ್ನು ನೋಡಿ) ಇವನು ಲಚುಮಯ್ಯ ಸರದಾರ, ಇವಳು ಲಚುಮಯ್ಯನ ಹೆಂಡತಿ.

(ಅವಳ ತಲೆಯನ್ನು ಸವರುವನು. ಅಷ್ಟರಲ್ಲಿ ಹುಡುಗಿಯರೂ ಹಿಂತಿರುಗುವರು. ಸಾತು ಪದ್ದು ತಾವರೆ ಎಲೆಯಲ್ಲಿ ನೀರನ್ನು ತಂದು ಹಣೆಗಿಟ್ಟುಕೊಂಡಿದ್ದ ಕುಂಕುಮದಲ್ಲೆ ಸ್ವಲ್ಪ ತೆಗೆದು ಅದರೊಳಕ್ಕೆ ಉದುರಿಸಿ ಕಲಕಿ ಇಬ್ಬರಿಗೂ ಆರತಿ ಎತ್ತುವರು. ಇತರರು ಅವರೊಂದಿಗೆ ಹಾಡುವರು.)

ಸಾತು, ಪದ್ದು— ಆರತಿ ಎತ್ತುವೆ
ಲಚುಮಯ್ಯ ಲಚುಮಿಗೆ
ಮುತ್ತಿನ ಆರತಿ
ಗಂಡ ಹೆಂಡತಿಗೆ

ನಮ್ಮ ಮನೇಯಲಿ
ಸಂಸಾರ ಹೂಡಲಿ
ನಮ್ಮಂಥ ಮಕ್ಕಳು
ಹತ್ತಾರಾಗಲಿ

ಮಕ್ಕಳನೊಡಗೂಡಿ
ದಿನದಿನ ಪಾರ್ಕಿಗೆ
ಲಚುಮಯ್ಯ ಲಚುಮಿಯು
ಬರಲೆಂದು ಬಯಸುತ ||

ಜಯು, ಶಾಂತು— ಆರತಿಯೆತ್ತುವೆ

ನಾಣಿ—(ಹಿಂತಿರುಗಿ ಬಂದು) ಶೋಭಾನೆ

(ಎಲ್ಲರೂ ನಗುವರು. ಪರದೆ ಬೀಳುವುದು)

ಭದ್ರಂ ಶುಭಂ ಮಂಗಳಂ

---

# ಪಾರ್ಕಿನಲ್ಲಿ ಹುಣ್ಣಿಮೆ

ಅಂದು ಹುಣ್ಣಿಮೆ. ಸಂಜೆ ಪಾರ್ಕಿಗೆ ಹೋದವನು ರಾತ್ರಿಯ ವರೆವಿಗೂ ಅಲ್ಲಿಯೇ ಇದ್ದೆ. ಆ ದಿನ ನಾನು ಏಕಾಂಗಿಯಾಗಿದ್ದೆ. ಸ್ನೇಹಿತರೆಲ್ಲರೂ ನನ್ನನ್ನು ಬಿಟ್ಟು ಸಿನೀಮಾಕ್ಕೆ ತೆರಳಿದ್ದರು. ಹೊತ್ತಾಗಿ ಊಟವಾಗಿದ್ದುದರಿಂದ ಸುತ್ತಾಡಿಕೊಂಡು ಬರುವುದು ನನಗೆ ಲೇಸೆಂದು ತೋರಿತ್ತು. ನನ್ನ ಸ್ನೇಹಿತರಿಗಾದರೋ ಕಾರಿನಲ್ಲಿ ತೆರಳಿ ಸಿನೀಮಾ ಮಂದಿರದಲ್ಲಿ ಕೂಡವ ಭೋಗ ಬೇಕಾಗಿತ್ತು. ರಜದ ದಿನವೆಂದರೆ ಸಂಜೆ ಸಿನೀಮಾ ನೋಟ ಬೇಕು ಅವರಿಗೆ; ಬೆಳಿಗ್ಗೆ ಎದ್ದಾಗ ಕಾಫಿ ಬೇಕಾಗುವಂತೆ.

ಸಂಜೆ ಮನೆಯಿಂದ ಹೊರಟವನು ಆರುಮೈಲಿ ನಡೆದು ಪಾರ್ಕನ್ನು ಸೇರಿದ್ದೆ. ದಾರಿಯ ಉದ್ದಕ್ಕೂ ಯೋಚನೆಗಳು. ಅವೂ ಒಂದಕ್ಕೊಂದಕ್ಕೆ ಸಂಬಂಧವಿಲ್ಲ. ಆಗಾಗ ಗೀತಗಳು ಮನದಲ್ಲಿ ಸುಳಿಯುತ್ತಿದ್ದವು. ಅವುಗಳನ್ನು ನನಗೆ ತೋರಿದಂತೆ ಹಾಡಿಕೊಳ್ಳುತ್ತಾ ಹೆಜ್ಜೆಹಾಕುತ್ತಿದ್ದೆ. ಪಾರ್ಕಿನಲ್ಲಿ ಕೆರೆಯ ದಂಡೆಯಮೇಲೆ ನಡೆಯುತ್ತಿದ್ದಾಗ ಚಂದಿರ ಮೂಡಿದ. ಆಗ ನನ್ನ ಗೆಳೆಯರಾದ ಶ್ರೀವರ್ಮ ಎಂ.ವಿ. ಸೀತಾರಾಮಯ್ಯ ನವರು ಆ ಬನದ ಮತ್ತು ಕೆರೆಯ ಸಂಬಂಧವಾಗಿ ಬರೆದ ಕವನವೊಂದು ನೆನಪಿಗೆ ಬಂತು. ಅದನ್ನು ಒಂದೆರಡು ಸಲ ಓದಿದ್ದೆ. ನನಗೆ ಬಾಯಿ ಪಾಟವಾಗಿತ್ತು. ಮುದ್ದಾದ ಕವನ. ಅದನ್ನೇ ಹಾಡಲಾರಂಭಿಸಿದೆ. ಅದರ ಕೊನೆಯ ಚರಣವಿದು:—

ಹಲಸೂರಿನ ಕೆರೆ ಸುಂದರ
ನಲವು ಚೆಲುವುಗಳ ಮಂದಿರ
ಬಾನೊಪ್ಪಿರೆ ಮಣಿ ಹಂದರ
ಬೆಳಗುತಲಿರೆ ಮೇಲ್ ಚಂದಿರ
ಬಿಳಿ ಮುಗಿಲಿನ ಮಾಲೆ
ಹಾಲಿನ ಕೆನೆ ಹೋಲೆ
ನೀರವ ನಿಶಿಯಲಿ ಬಂಧುರ
ಭಾವನೆಗಳು ತೇಲೆ.

ಬೆಳದಿಂಗಳು ಸೊಗಸಾಗಿದೆ. ಸುಂದರ ಬನ, ಸುಂದರ ಇನ, ಎತ್ತೆತ್ತಲು ಸೌಂದರ್ಯದ ರಾಶಿ. ಸಗ್ಗ ಸುಖ! ಇದನ್ನು ಬಿಟ್ಟು ಮನೆಗೆ ತೆರಳಲು ಹೇಗಾಗುವುದು? ಪ್ರಕೃತಿಯ ಸುಂದರ ಮಂದಿರದಲ್ಲಿ ಹಾಗೇ ತಲ್ಲೀನನಾಗಿ ಕುಳಿತಿದ್ದೇನೆ. ನಾನು ಕುಳಿತಿದ್ದೆಡೆಗೆ ಪಾರ್ಕಿನ ಮಾಲಿ ಬಂದ. "ಏನು ಸ್ವಾಮಿ ಇಷ್ಟುಹೊತ್ತಾಗಿದೆ ಇನ್ನೂ ಇಲ್ಲೇ ಇರುವಿರಲ್ಲಾ" ಎಂದ. "ಏನೋ ಕುಳಿತುಕೊಂಡುಬಿಟ್ಟೆ. ಬೆಳದಿಂಗಳು ಬಹಳ ಚೆನ್ನಾಗಿದೆ" ಎಂದೆ. "ಹೌದು, ಹೌದು ಆದರೆ ಈ ದಿನ ನೀವು ಇಲ್ಲಿ ಕುಳಿತಿರುವುದು ಸರಿಯಲ್ಲ ಹೊರಟುಬಿಡಿ" ಎಂದ. "ಯಾತಕ್ಕೆ? ಎಂದೂ ನೀನು ಹೀಗೆ ಹೇಳಿದವನಲ್ಲ ಈ ದಿನ ಹೀಗೆನ್ನುತ್ತಿದ್ದಿ?" ಎಂದು ಕೇಳಿದೆ. ಎಷ್ಟೋ ಸಲ ರಾತ್ರಿ ಹತ್ತು ಹನ್ನೊಂದು ಗಂಟೆಯವರಿವಿಗೆ ಏಕಾಂಗಿಯಾಗಿ ಅಲ್ಲೆ ಕುಳಿತಿದ್ದೇನೆ. "ಹೌದು ಹೀಗೆ ಹೇಳುವುದರಲ್ಲಿ ಉದ್ದೇಶವಿದೆ. ವರ್ಷದಲ್ಲಿ ಈ ದಿನ ರಾತ್ರಿ ಇಲ್ಲಿ ವಿಶೇಷ ನಡೆಯುವುದು. ಬೇಡ ನೀವು ಇಲ್ಲಿರುವುದು. ಹೊರಟುಬಿಡಿ" ಎಂದ. "ಯಾಕೆಂಬುದನ್ನು ತಿಳಿಸಿದರೇ ನಾನಿಲ್ಲಿಂದ ಹೊರಡುವುದು" ಎಂದೆ. "ಯಾತಕ್ಕೆನ್ನುವುದನ್ನು ನಾಳೆ ಹೇಳುತ್ತೇನೆ ಇದೋ ನಾನೂ ಈಗ ಇಲ್ಲಿಂದ ಹೊರಟೆ" ಎಂದು ಹೇಳಿ ಅಲ್ಲಿಂದ ಅವನು ಹೊರಟೇಬಿಟ್ಟ. ನನಗೂ ಅಲ್ಲಿಂದ ಹೊರಟುಬಿಡೋಣವೆನ್ನಿಸಿತು. ಆದರೆ ಏನು ವಿಶೇಷ ನಡೆಯುವುದೋ ನೋಡೇಬಿಡಬೇಕೆನ್ನಿಸಿತು. ವಿಶೇಷ ಏನಿರಬಹುದು? ಕೆಲವು ದಿನಗಳ ಹಿಂದೆ ಇಲ್ಲೇ ಒಬ್ಬ ಆಂಗ್ಲ ಯುವತಿ ಯುವಕನೊಬ್ಬನೊಡನೆ ದೋಣಿಯಲ್ಲಿ ಕುಳಿತು ವಿಹರಿಸುತ್ತಿದ್ದಳಂತೆ. ಮಾರನೆಯ ದಿನ ಅವಳ ಶವ ಕೆರೆಯಲ್ಲಿ ತೇಲುತ್ತಿದ್ದಿತಂತೆ. ಅವಳ ಭೂತವೇನಾದರೂ ಇಲ್ಲಿ ಕಾಣಿಸಿಕೊಳ್ಳುವುದೇ? ಅವಳೇನಾದರೂ ಮೋಹಿನಿಯಾಗಿ ಇಲ್ಲಿ ಸಂಚರಿಸುತ್ತಿರುವಳೇ? ಯೋಚಿಸುತ್ತಿದ್ದೆ. ಆ ಹೊತ್ತಿಗೆ ಕಬ್ಬನ್‌ಪಾರ್ಕಿನಲ್ಲಿ ಬಹಳ ವರ್ಷಗಳ ಹಿಂದೆ ನಡೆಯಿತೆಂದು ಹೇಳಿದ್ದ ಒಂದು ಮೋಹಿನಿ ಕತೆ ನೆನಪಿಗೆ ಬಂತು. ಅದನ್ನು ನನ್ನ ಸ್ನೇಹಿತ ಶ್ರೀನಿವಾಸರಾಯ ನಡೆದ ಸಂಗತಿಯೆಂದೇ ಬಿತ್ತರಿಸಿದ್ದ. ಶ್ರೀನಿವಾಸರಾಯನ ಸ್ನೇಹಿತ ರಾಮಚಂದ್ರರಾಯನಿಗೆ ಸಿನೀಮಾ ಹುಚ್ಚು ಬಹಳ. ಆತ ಯಾವಾಗಲೂ ಹೋಗುತ್ತಿದ್ದುದು ಇಂಗ್ಲೀಷು ಸಿನೀಮಾ

ಮಂದಿರಗಳಿಗೆ; ರಾತ್ರಿಯ ಎರಡನೆ ಆಟಕ್ಕೆ. ಹಿಂತಿರುಗುವಾಗ ಕಬ್ಬನ್ ಪಾರ್ಕನ್ನು ಹೊಕ್ಕು ಬರುತ್ತಿದ್ದ. ಕಬ್ಬನ್‌ಪಾರ್ಕನ್ನು ಹೊಕ್ಕಾಗ ರಾತ್ರಿ ಹನ್ನೆರಡುಗಂಟೆ ಸಮಯವಾಗಿರುತ್ತೆ. ಪಾರ್ಕು ನಿರ್ಜನವಾಗಿರುತ್ತೆ. ಒಬ್ಬನೇ ಬೈಸಿಕಲ್ ತುಳಿಯುತ್ತಾ ಬರುತ್ತಿರುತ್ತಾನೆ. ಒಂದು ದಿನ ಅದೂ ಹುಣ್ಣಿಮೆಯ ರಾತ್ರಿ, ಎಂದಿನಂತೆ ಸಿನೀಮಾಕ್ಕೆ ಹೋಗಿ ಬರುತ್ತಿದ್ದಾನೆ. ವಿಕ್ಟೋರಿಯಾ ರಾಣಿಯ ವಿಗ್ರಹದ ಎಡಗಡೆಯಿಂದ ಪಾರ್ಕಿಗೆ ಹೋಗುವ ರಸ್ತೆ ಬಹಳ ಇಳಿಜಾರಾಗಿದೆ. ಬೈಸಿಕಲ್ಲಿನ ವೇಗ ಹೆಚ್ಚಿದೆ. ರಾಮಚಂದ್ರರಾಯ ಆಗ ನೋಡಿದ್ದ ಚಿತ್ರದ ಕತೆಯನ್ನೇ ನೆನೆಯುತ್ತಾ ನಡೆದಿದ್ದಾನೆ. ಅವನ ಬೈಸಿಕಲ್ ಅಠಾರಾಕಚೇರಿಗೂ ತವಾಷೆ ಬಂಗಲೆಗೂ ನಡುವೆ ಇರುವ ಸಾಲುಮರದಬಳಿಗೆ ಬರುವ ಹೊತ್ತಿಗೆ ಅಲ್ಲಿ ಒಂದೆಡೆ ಹಾಸಿರುವ ಶಿಲಾಸನದಮೇಲೆ ಓರ್ವ ತರುಣಿ ಕುಳಿತಿರುವಂತೆ ಕಂಡಿತವನಿಗೆ. ಬೆಳದಿಂಗಳ ರಾಶಿ ಚೆಲ್ಲಿದೆ ಎಲ್ಲೆಲ್ಲೂ. ಬನ ಮೋಹಕವಾಗಿದೆ. ತರುಣಿ ಶುಭ್ರವಾದ ಶ್ವೇತವರ್ಣದ ಸೀರೆ ಯನ್ನುಟ್ಟದ್ದಾಳೆ. ರೂಪವತಿ, ಲಾವಣ್ಯಮಯಿ. “ಯಾರಿರಬಹುದು ಆಕೆ? ಅಷ್ಟುಹೊತ್ತಿನಲ್ಲಿ ಒಬ್ಬಳೇ ಅಲ್ಲೇಕೆ ಕುಳಿತಿರುವಳು? ಯಾರಿ ಗಾದರೂ ಕಾಯುತ್ತಿರುವಳೇ? ಏನೋ ರಹಸ್ಯವಿರಬೇಕು” ಎಂದು ಕೊಂಡು, ಅದರ ಪತ್ತೆಹಚ್ಚಬೇಕೆಂದು ಆಕಡೆಗೇ ಬೈಸಿಕಲ್ಲನ್ನು ಬಿಟ್ಟ. ಆಕೆ ಎದ್ದು ನಿಂತಳು. ಮುಂದೆನಡೆದಳು. ಅವಳ ನಿಲುಗೆಯಲ್ಲಿ ನಡೆಯಲ್ಲಿ ಒಂದು ವೈಕರಿಯಿದೆ. ಅವನು ಬೈಸಿಕಲ್ ತುಳಿಯುತ್ತಿದ್ದರೆ ಅವಳು ಮುಂದು ಮುಂದಕ್ಕೆ ಹೋಗುತ್ತಿದ್ದಾಳೆ. ಅವನು ಬೈಸಿಕಲ್ಲಿನ ವೇಗವನ್ನು ಕಡಮೆಮಾಡಿದ. ಅವಳೂ ನಿಧಾನವಾಗಿ ನಡೆಯ ತೊಡ ಗಿದಳು. ಅವನು ಬೈಸಿಕಲ್ಲನ್ನು ನಿಲ್ಲಿಸಿ ಕೆಳಗೆ ಇಳಿದು ಹಾಗೆಯೇ ನಿಂತುಕೊಂಡ. ಅವಳೂ ಬೈಸಿಕಲ್ಲಿಗೆ ಅದೇ ದೂರದಲ್ಲಿ ಹಾಗೆಯೇ ನಿಂತುಕೊಂಡಳು. ಬೆಳದಿಂಗಳ ಪ್ರಭೆ ಅವಳಮೇಲೆ ಬೀಳುತ್ತಿದೆ. ಸುರಲೋಕ ಸುಂದರಿ! ಮುಖದಲ್ಲಿ ಮುಗುಳ್ ನಗೆ. ಅವಳು ಕಾಲೇಜಿನ ತರುಣಿಯೇ? ಯಾರ ಮನಮೋಹಿನಿ ಅವಳು! ಮಾತನಾಡಿಸಲು ಯತ್ನಿಸಿದ. ಅವನ ಬಾಯಿಂದ ಮಾತೇ ಹೊರಡದು. ಗಂಟಲು

ಕಟ್ಟಿಕೊಂಡು ಬರುತ್ತಿದೆ. ಅಷ್ಟರಲ್ಲಿ ಬೈಸಿಕಲ್ಲಿನ ದೀಪ ಆರಿಹೋಗಿತ್ತು. ದೀಪವನ್ನು ಹಚ್ಚಿಸಲು ಯತ್ನಿಸಿದ. ಆದಿನ ತಾನೆ ಬೆಂಕಿಪೆಟ್ಟಿಗೆಯನ್ನು ಹೊಸದಾಗಿ ಕೊಂಡುಕೊಂಡಿದ್ದ. ಆ ಪೆಟ್ಟಿಗೆಯಲ್ಲಿದ್ದ ಬೆಂಕಿಕಡ್ಡಿಗಳೆಲ್ಲವೂ ಮುಗಿದವು. ದೀಪ ಹಚ್ಚಿಸಲು ಆಗಲಿಲ್ಲ. ಹತಾಶನಾಗಿ ಬೈಸಿಕಲ್ಲನ್ನು ನೂಕಿಕೊಂಡು ಹೊರಟ. ಆಕೆಯು ಮುಂದು ಮುಂದೆ ಹೊರಟಳು. ಅವರು ಸರ್ವೇ ಆಫೀಸಿನ ಬಳಿಗೆ ಬಂದಿರಬೇಕು. ಆಕೆ ಸರ್ವೇ ಆಫೀಸಿನ ಒಳಕ್ಕೆ ನುಗ್ಗಿದಳು. ಅವನೂ ನೋಡುತ್ತಾನೆ ಅದರ ಗೇಟು ಹಾಕಿ ಭದ್ರಿಸಿದೆ! ಆಕೆ ಕಟ್ಟಡವನ್ನು ಹೊಕ್ಕು ಮೆಟ್ಟಲುಗಳನ್ನು ಹತ್ತಿದಂತೆ ಶಬ್ದವಾಯಿತು! ಗಹಗಹನೆ ನಗುವಶಬ್ದ ಕೇಳಿಸಿತು! ಆ ಶಬ್ದದಿಂದ ಅವನ ಎದೆ ಒಡೆದು ಹೋಯಿತು. ಬೈಸಿಕಲ್ಲನ್ನು ಕೆಳಗೆಹಾಕಿಕೊಂಡು ಬಿದ್ದುಬಿಟ್ಟ. ಮಾರನೆಯದಿನ ಬೆಳಗ್ಗೆ ಕಂಟೋನ್‌ಮೆಂಟ್ ರೈಲ್ವೆ ಸ್ಟೇಷನ್ನಿಗೆ ಹೋಗುತ್ತಿದ್ದ ಗಾಡಿಯವರು ಅವನನ್ನು ಎತ್ತಿಕೊಂಡು ಹೋಗಿ ಆಸ್ಪತ್ರೆಯಲ್ಲಿ ಸೇರಿಸಿದರು. ಅವನಿಗೆ ವಾಸಿಯಾಗುವುದಕ್ಕೆ ಮೂರುತಿಂಗಳು ಹಿಡಿಯಿತಂತೆ. ಶ್ರೀನಿವಾಸರಾಯ ಹೇಳಿದ್ದ ಈ ಕತೆ ನೆನಪಿಗೆ ಬಂತು. ಎದೆ ಜಗ್ ಎಂದಿತು. ಆದರೂ ಅಂತಹ ರಹಸ್ಯ ವೇನಾದರೂ ಇಲ್ಲಿ ನಡೆಯುವುದೇನೋ ನೋಡೋಣ. ಹೇಡಿಯ ಹಾಗೆ ಹೊರಟು ಹೋಗಬಾರದೆಂದು ಕುಳಿತೆ. ಸುತ್ತಲೂ ನೋಡಿದೆ. ಯಾರೂ ಕಾಣಿಸರು. ನೇರಳೆ ಮರದಲ್ಲಿ ಮಾತ್ರ ಸರ ಸರ ಶಬ್ದ. ಬಹಳ ವರ್ಷದ ನೇರಳೆಮರ ಒಳ್ಳೆ ಆಲದಮರದಂತಿದೆ. ಅಲ್ಲಿಗೆ ಹೋಗಿ ನೋಡೋಣವೆಂದು ಎದ್ದೆ. ಕಾಲನ್ನು ಎತ್ತಿಡಲು ಆಗಲೇ ಇಲ್ಲ. ಸೋಪಾನದಬಳಿ ಬೆಳದಿಂಗಳು ಚೆನ್ನಾಗಿ ಬೀಳುತ್ತಿದೆ. ಅಲ್ಲಿಹೋಗಿ ಕುಳಿತುಕೊಳ್ಳೋಣವೆಂದು ನೋಡಿದೆ. ಅದೂ ಆಗಲಿಲ್ಲ. ಯಾಕೆ ನನಗೆ ಹೀಗೆ ಆಗುತ್ತಿದೆ? ನನ್ನ ಧೈರ್ಯ, ಸಾಹಸ ಏನಾಯಿತು? ಹಿಂದೆ ಎಂತೆಂತಹದೊ ಸನ್ನಿವೇಶಗಳಲ್ಲಿ ಪಾರಾಗಿ ಬಂದಿದ್ದೇನೆ. ನಾನಿನ್ನೂ ಚಿಕ್ಕ ಹುಡುಗನಾಗಿದ್ದಾಗ—ಆಗಲೇ ಇಳಿಗೆ ಇಫ್ಲೂಂಜಾ ಮಾರಿ ಮುತ್ತಿದ್ದಿದು. ಘೋರಯುದ್ಧ ಕಳೆದಿತ್ತು. ಎಲ್ಲೆಲ್ಲಿಯೂ ಮಾರಿಯ ಉಪದ್ರವ—ಆಗ ನನಗೆ ಮೊದಲೇ ಜ್ವರಬಂದು ವಾಸಿಯಾಗಿತ್ತು. ಆಗ

ಬೆಂಗಳೂರಿನ ಸುತ್ತಮುತ್ತಲ ಹಳ್ಳಿಗಳಿಗೆ ಹೋಗಿ ಗಂಜಿ ಔಷಧಿ ಒದಗಿಸುವ ಏರ್ಪಾಡು ನಡೆದಿತ್ತು. ನಾನೂ ಆ ಸ್ವಯಂಸೇವಕರ ದಳದಲ್ಲಿ ಸೇರಿದ್ದೆ. ಬಸವನಗುಡಿಗೆ ಎರಡು ಮೈಲಿದೂರದಲ್ಲಿ ಒಂದು ಹಳ್ಳಿ ಇದೆ. ಅಲ್ಲಿಗೆ ಗಂಜಿಯ ಬಕೀಟು, ಔಷಧಿಯ ಬಾಟಿಲುಗಳನ್ನು ಹಿಡಿದು ಬೆಳಿಗ್ಗೆ ಮಸಕು ಮಸಕಾಗಿರುವಾಗಲೇ ಹೋಗುತ್ತಿದ್ದೆವು. ಊರಿನ ಮುಂದಿದೆ ಅಶ್ವಥ ಕಟ್ಟೆ. ಕಟ್ಟೆಯ ಜಗಲಿಯಮೇಲೆ ನಿಂತು ಶಂಖವನ್ನು ಓದುತ್ತಿದ್ದೆವು. ಊರಿನವರೆಲ್ಲರೂ ಬಂದು ಸೇರುತ್ತಿದ್ದರು. ಒಬ್ಬೊಬ್ಬರಿಗೂ ಅವರ ಮನೆಯಲ್ಲಿ ಎಷ್ಟು ಜನವಿರುವರೋ ಅಷ್ಟು ಜನರಿಗೆ ಸಾಕಾಗುವಷ್ಟು ಔಷಧಿ ಗಂಜಿಕೊಟ್ಟು ಕಳುಹಿಸುತ್ತಿದ್ದೆವು. ಒಂದುದಿನ ಹೀಗೆ ಗಂಜಿ ಮತ್ತು ಔಷಧಿಗಳನ್ನೂ ಹಿಡಿದು ಆ ಊರಕಡೆಗೆ ಹೊರಟಿದ್ದೇವೆ. ಬಸವನಗುಡಿಯ ಆಚೆ ಲಾಲ್‌ಬಾಗಿನ ಕೆರೆಯಿದೆ. ಕೆರೆಯ ಅಂಗಳದಲ್ಲಿ ಹತ್ತಾರು ಇಟ್ಟಿಗೆಗೂಡುಗಳಿಟ್ಟಿದ್ದಾರೆ. ಅವುಗಳ ಒಂದು ಗೂಡಿನಬಳಿ ಹೆಣ್ಣು ಶವವೊಂದನ್ನು ನಿಲ್ಲಿಸಿದೆ! ಮತ್ತೊಂದು ಗಂಡುಶವ ಗೂಡಿನ ಸಂಧಿಯಲ್ಲಿದೆ! ಅದರಕಾಲು ನಿಂತಿರುವ ಶವದ ಭುಜದಮೇಲಿದೆ! ಆ ಕಾಲದಲ್ಲಿ ಒಂದೊಂದು ಮನೆಯಲ್ಲಿಯೂ ಶೇಕಡ ಐವತ್ತರಂತೆ ಸಾವು. ಕೆಲವು ಮನೆಗಳಲ್ಲಿ ಒಂದೋ ಎರಡೋ ಪಿಳ್ಳೆಗಳ ವಿನಹ ಎಲ್ಲರೂ ಮಾರಿಗೆ ಆಹುತಿಯಾಗಿರುತ್ತಿದ್ದರು. ಒಂದು ಮನೆಗೆ ಔಷಧಿ, ಗಂಜಿ ಕೊಡಲು ಹೋಗಿ ನೋಡುತ್ತೇನೆ—ಮನೆಯಲ್ಲಿದ್ದವರು ಗಂಡ ಹೆಂಡತಿ ಮೂರು ಮಕ್ಕಳು ಒಂದು ಕೈಕೂಸು—ಎಲ್ಲರೂ ಹಾಸಿಗೆಯಮೇಲೆ ಮಲಗಿದ್ದ ಹಾಗೆಯೇ ಸತ್ತು ಬಿದ್ದಿದ್ದಾರೆ. ಎಳೆಯಕೂಸು ಮಟ್ಟಿಗೆ ತಾಯಿಯ ಮೊಲೆಯನ್ನು ಬಾಯೊಳಗಿಟ್ಟುಕೊಂಡಿದೆ. ಹಾಲುಬರದು; ಅದು ಬಿಡದು. ಇಂತಹ ದೃಶ್ಯಗಳೆಷ್ಟನ್ನೋ ನಾನು ಕಣ್ಣಾರೆ ನೋಡಿದ್ದೆ. ಇನ್ನು ಶವ ಸಂಸ್ಕಾರಕ್ಕೆ ಬಿಡುವೋ! ಬಿದ್ದೆಡೆಯಲ್ಲಿಯೇ ಶವಗಳು ಕೊಳತು ನಾರುತ್ತಿದ್ದವು. ಕೆಲವು ಪುಣ್ಯಾತ್ಮರು ಶವ ಸಂಸ್ಕಾರಗಳ ಕಾರ್ಯಕ್ಕಾಗಿಯೇ ಟೊಂಕಕಟ್ಟಿ ನಿಂತು ಪುಣ್ಯಕಟ್ಟಿಕೊಂಡರು. ಆದಿನ ಯಾರೋ ದುಷ್ಟರು ಆ ಎರಡು ಶವಗಳನ್ನು ಹಾಗೆ ಇಟ್ಟಿಗೆ ಗೂಡಿನ ಬಳಿ ಇಟ್ಟು ಹೊರಟುಹೋಗಿದ್ದಾರೆ. ನಾವು ಅದರೆಡೆಗೆ ಬಂದಾಗ ಇನ್ನೂ

ಸರಿಯಾಗಿ ಸೂರ್ಯೋದಯವಾಗಿರಲಿಲ್ಲ. ಯಾರೋ ಹೆಂಗಸು ಅಲ್ಲಿ ನಿಂತಿರುವಳೆಂದು ತಿಳಿದೆ. ಯಾಕೆ ಆ ಹೆಂಗಸು ಅಲ್ಲಿ ನಿಂತಿದ್ದಾಳೆಂದು ನೋಡಲು ಹೋಗುತ್ತೇನೆ. ಹತ್ತಿರಕ್ಕೆ ಹೊಗುವಾಗ ಇಟ್ಟಿಗೆಯ ರಾಸಿ ಕದಲಿತು. ಶವ ನೇರಾಗಿ ನನ್ನ ಮೇಲೆ ಬಿಳಬಂದಿತು! ಅಷ್ಟರಲ್ಲಿಯೇ ನಮ್ಮೊಡನೆ ಇದ್ದ ಹಿರಿಯರೊಬ್ಬರು ಓಡಿಬಂದು ನನ್ನನ್ನು ಪಕ್ಕಕ್ಕೆ ಎಳೆದುಕೊಂಡರು. ಅಬ್ಬಾ ಆ ದೃಶ್ಯವನ್ನು ನೆನೆದುಕೊಂಡರೆ ಈಗಲೂ ಮೈ ಜುಂ ಎನ್ನುತ್ತಿದೆ. ಆಗ ನನಗೆ ಸ್ವಲ್ಪವೂ ಹೆದರಿಕೆಯುಂಟಾಗಲಿಲ್ಲ.

ಮತ್ತೊಂದುಸಲ ನಮ್ಮೂರಿನಬಳಿ ದೊಡ್ಡದೊಂದು ಭಾವಿಯಿದೆ. ಅಲ್ಲಿಗೆ ಬೆಳಿಗಿನಜಾವ ನಾಲ್ಕು ಗಂಟೆಗೇ ನಾನು ನನ್ನ ಸ್ನೇಹಿತ ಈಜುವುದಕ್ಕೆ ಹೋಗಿದ್ದೇವೆ. ನಾನುಮುಟ್ಟಗೆ ಭಾವಿಯೊಳಕ್ಕೆ ದುಮುಕಿದೆ. ಅವನಿನ್ನೂ ನೀರಿನಕಡೆಗೆ ಹೋಗಿದ್ದ. ನನಗೆ ಕೆಳಗಡೆ ಏನೋ ಸಿಕ್ಕಿದ ಹಾಗಾಯಿತು. ಮೇಲಕ್ಕೆ ಹಿಡಿದು ತಂದೆ. ಕೈತಪ್ಪಿತು. ಹಿಡಿಯಲು ಹೋಗುತ್ತೇನೆ. ಸಿಕ್ಕದೆ ಬಾವಿಯಲ್ಲಿ ಮೂರುಸಲ ಸುತ್ತಿಸಿತು. ಕೊನೆಗೆ ಎಳೆದು ದಡಕ್ಕೆ ತಂದುಹಾಕುತ್ತೇನೆ, ಹೆಂಗಸಿನ ಶವ! ನೀರಿನಕಡೆಗೆ ಹೋಗಿದ್ದ ನನ್ನ ಸ್ನೇಹಿತ ಬಂದು ನೋಡುತ್ತಾನೆ, ಹೆದರಿಕೆ! ಊರಿನ ಕಡೆಗೇ ಓಡಿಬಿಟ್ಟ. ನನಗೆ ಹೆದರಿಕೆಯಾಗಲಿಲ್ಲ. ಅಲ್ಲೇ ನಿಂತೆ. ಬಿಟ್ಟು ಹೋದರೆ ನಾಯಿನರಿಗಳು ಅದನ್ನು ಕಿತ್ತು ತಿಂದಾವೆಂದು ಭಯ. ಅವನು ಊರಿಗೆ ಹಿಂತಿರುಗಿದ್ದಾನೆ. ಊರಿನಿಂದ ಯಾರಾದರೂ ಬಂದಾರೆಂದು ಕಾದು ನಿಂತೆ. ಊರಿನವರು ಬಂದರು. ಶವಸಂಸ್ಕಾರವಾಯಿತೆನ್ನಿ. ಅದು ಪಟೇಲನ ಸೊಸೆ ತುಂಬುಬಸರಿಯ ಶವ! ಅಂದಿನಿಂದ ಆ ಭಾವಿಯಕಡೆಗೆ ಯಾರೂ ಹೋಗುತ್ತಿರಲಿಲ್ಲ. ಅವಳ ಭೂತ ಅಲ್ಲಿದೆಯೆಂದು ಸುದ್ದಿ ಹರಡಿತು. ಆದರೆ ನಾನು ರಜದಿನಗಳಲ್ಲಿ ಹಳ್ಳಿಗೆಹೋದಾಗಲೆಲ್ಲಾ ಅಲ್ಲಿಗೇ ಈಜುವುದಕ್ಕೆ ಮತ್ತು ಬಟ್ಟೆ ಒಗೆಯಲು ಹೋಗುತ್ತಿದ್ದಿದ್ದು. ಒಂದು ದಿನವೂ ಒಂದೂ ಭೂತವೂ ಕಾಣಿಸಿಕೊಂಡಿರಲಿಲ್ಲ.

ಮತ್ತೊಂದುಸಲ ನಮ್ಮ ತಾಯಿ ಅಜ್ಜಿ ಎಲ್ಲರನ್ನೂ ಕರೆದುಕೊಂಡು ಮಾಗಡಿಗೆ ಹೊರಟದ್ದೆ. ಅವರೊಡನೆ ಇದ್ದವನು ನಾನೇ ಗಂಡಾಳು. ಇನ್ನೂ ಹದಿನಾಲ್ಕು ಹದಿನಾರು ವರುಷದ ತರುಣ. ಹಾದಿಯಲ್ಲಿ ಕತ್ತಲು

ಮುಸುಕಿತು. ರಾತ್ರಿ ಹಾದಿಯಲ್ಲಿದ್ದ ಗುಡೇಮಾರನಹಳ್ಳಿಯಲ್ಲಿ ತಂಗಿದೆವು. ಬೆಳಿಗ್ಗೆ ಕೋಳಿ ಕೂಗಿದೊಡನೆ ಗಾಡಿಯನ್ನು ಹೂಡಿದೆ. ಆ ಹಳ್ಳಿಯಿಂದ ಎರಡು ಮೈಲಿಗಳು ಬಂದಿದ್ದೇವೆ. ರಸ್ತೆಯಲ್ಲಿ ಒಂದು ಸಾಲುಮರದ ಮೇಲಿನಿಂದ ಬೆಂಕಿ ಉದರುತ್ತಿದೆ. ಕಿಡಿ....ಕಿಡಿ....ಕಿಡಿ! ನನ್ನ ತಾಯಿಯ ಕಣ್ಣಿಗೆ ಮೊದಲು ಅದು ಬಿದ್ದಿತು. ಅವರು ಅದನ್ನು ನನ್ನ ಅಜ್ಜಿಗೆ ತೋರಿಸಿದರು. ನನ್ನ ಅಜ್ಜಿ ಅದು ಕೊಳ್ಳಿದೆವ್ವವೆಂದು ತೀರ್ಮಾನ ಕೊಟ್ಟರು. ನಾನು ಗಾಡಿ ಹೊಡೆಯುತ್ತಿದ್ದೆ. ಗಾಡಿಯನ್ನು ನಿಲ್ಲಿಸಲು ಹೇಳಿದರು. ನಿಲ್ಲಿಸಿ ಯಾತಕ್ಕೆಂದು ಕೇಳಿದೆ. ಬೆಂಕಿ ಉದುರುತ್ತಿರುವುದನ್ನು ತೋರಿಸಿದರು. ಅದೋ ಕೊಳ್ಳಿದೆವ್ವ! ಎಂದು ಹೇಳಿದರು. ನನಗೆ ದೆವ್ವಗಳಲ್ಲಿ ನಂಬಿಕೆಯಿಲ್ಲ. ಆದರೆ ಯಾವನಾದರೂ ಕಳ್ಳ ಅಲ್ಲಿ ಕುಳಿತಿರುವನೇ ಎನ್ನಿಸಿತು. ನಮ್ಮದು ಒಂದೇ ಗಾಡಿ ಆ ದಾರಿಯಲ್ಲಿ ಹೋಗುತ್ತಿರುವುದು. ಕೆಳಕ್ಕಿಳಿದುಹೋಗಿ ನೋಡಿಕೊಂಡು ಬರಬೇಕೆಂದು ಹೊರಟೆ. ನನ್ನ ತಾಯಿ ನನ್ನನ್ನು ಬಿಡಲಿಲ್ಲ. ಭದ್ರವಾಗಿ ಹಿಡಿದುಕೊಂಡುಬಿಟ್ಟಳು. ತಾಯಿಯ ಕರಳು! ಗಾಡಿಯನ್ನು ಹಿಂತಿರುಗಿಸಬೇಕಾಯಿತು. ಗುಡೇಮಾರನಹಳ್ಳಿಯಲ್ಲಿಯೇ ಹೊತ್ತುಹುಟ್ಟುವವರಿಗೂ ಇದ್ದು ಆಮೇಲೆ ಪಯಣ ಮುಂದುವರಿಸಬೇಕಾಯಿತು. ಅದೇ ಜಾಗಕ್ಕೆ ಬಂದಾಗ, ಬಿಡಲಿಲ್ಲ ಹೋಗಿ ಆ ಮರವನ್ನು ಪರೀಕ್ಷಿಸಿಕೊಂಡು ಬಂದೆ. ಅದರಲ್ಲಿ ಯಾವುದೋ ಒಂದು ಕೊಂಬೆಗೆ ಬೆಂಕಿ ಬಿದ್ದಿತ್ತು! ಅದು ಉರಿದು ಕೆಂಡವನ್ನು ಸುರಿಸುತಿತ್ತು! ಇನ್ನು ಇಂತಹ ಸನ್ನಿವೇಶಗಳನ್ನು ಚಿತ್ರಿಸುತ್ತಾಹೋದರೆ ಕೊನೆಯೇ ಇಲ್ಲದಂತಾಗುತ್ತೆ. ಇಂತಹ ಸಂದರ್ಭಗಳಲ್ಲೆಲ್ಲಾ ತೋರಿದ್ದ ನನ್ನ ಧೈರ್ಯ ಈಗೇಕೆ ಮಾಯವಾಯಿತು!

ಸ್ವಲ್ಪಹೊತ್ತು ಯೋಚಿಸಿದ್ದಲ್ಲಿ ಅದು ಕೆಲವು ದಿವಸಗಳ ಹಿಂದೆ ಪ್ರಾಣ ಬಿಟ್ಟಿದ್ದ ಆ ಆಂಗ್ಲ ಯುವತಿಗೆ ಸಂಬಂಧಿಸಿದ್ದಿರಲಾರದೆಂದು ತೋರಿತು. ಯಾತಕ್ಕೆಂದರೆ ಮಾಲಿ ಪ್ರತಿ ವರ್ಷದಲ್ಲಿಯೂ ಈ ದಿವಸ ಇಂತಹ ವಿಶೇಷ ನಡೆಯುವುದು ಎಂದು ಹೇಳಿದ್ದಾನೆ. ಆಂಗ್ಲತರುಣಿ ಸತ್ತು ಕೆಲವು ದಿನಗಳಮಟ್ಟಿಗೆ ಆಗಿದೆ. ಇನ್ನೇನಾದರೂ ಇರಬೇಕು. ಅಂತೂ ಏನಾಗುವುದೋ ನೋಡೇಬಿಡಬೇಕೆಂದು ಕುಳಿತೆ.

ಹುಣ್ಣಿಮೆಚಂದ್ರ. ಆಗಸವನ್ನೆಲ್ಲಾ ತುಂಬಿದೆ ತಾರಾಗಣ. ಎದುರಿನಲ್ಲಿನ ಹಲಸೂರಿನ ಕೆರೆ ತಿಳಿಗೊಳದಂತೆ ಎಸೆಯುತ್ತಿದೆ. ಅದರಲ್ಲಿ ಬಿಂಬಿಸುತ್ತಿದೆ ತಾರೆಗಳ ಮಾಲೆ. ಕೆರೆಯ ಸುತ್ತಲೂ ಬೀದಿ. ಬೀದಿಯ ಉದ್ದಕ್ಕೂ ಎಲೆಕ್ಟ್ರಿಕ್ ದೀಪಗಳ ಸಾಲು. ಒಂಬತ್ತು ಗಂಟೆ ಹೊಡೆಯಿತು. ಅದೋ ಅಲ್ಲೇ ಹತ್ತಿರದಲ್ಲಿರುವ ಮಿಯಾನಿ ಲೈನ್ಸಿನಲ್ಲಿ ಬ್ಯೂಗಲನ್ನು ಊದಿದರು. ದೀಪಗಳು ಆರಿಹೋದವು. ಆಗಸದಲ್ಲಿ ನೋಡ! ಸ್ವಲ್ಪಹೊತ್ತಿಗೆ ಮುಂಚೆ ಒಂದು ತುಣಕೂ ಇರಲಿಲ್ಲ. ಎಲ್ಲಿಂದ ಬಂದು ಕವಿದವು ಮೋಡಗಳ ಸಮೂಹ! ಚಂದಿರನು ಕಗ್ಗತ್ತಲೆಯ ಗವಿಯನ್ನು ಸೇರಿದ. ಮೋಡಗಳು ಅವನನ್ನು ಬಂಧಿಸಿದವು. ತಾರೆಗಳು ಎತ್ತ ಅಡಗಿದವೋ! ಕತ್ತಲು ಮುಸುಕಿತು. ಹುಣ್ಣಿಮೆಯ ರಾತ್ರಿಯಲ್ಲಿ ಕಗ್ಗತ್ತಲು!

ಕಗ್ಗತ್ತಲು ಎಲ್ಲೆಲ್ಲು. ನಿರ್ಜನವಾಗಿದೆ ಪಾರ್ಕು. ಆಗಾಗ ಉದಿರಿದ್ದ ಮರದೆಲೆಗಳಲ್ಲಿ ಸರಸರ ಶಬ್ದ. ಆ ನೇರಳೆಯ ಮರದ ಕೊಂಬೆಗಳು ಮೆಲ್ಲಗೆ ಆಡುತ್ತಿರುವಂತೆ ಶಬ್ದ. ಉಳಿದೆಡೆಯಲ್ಲೆಲ್ಲಾ ನಿಶ್ಶಬ್ಧ. ನಿಶ್ಶಬ್ಧ.

ಬಡಗಣದಿಕ್ಕಿನಲ್ಲಿ ಕಂಡಿತು ಬೆಳಕು. ಆ ಎತ್ತರದ ಕಲ್ಲುಬಂಡೆಯ ಮೇಲೆ ಕೆಂಪೇಗೌಡನು ಕಟ್ಟಿಸಿರುವ ಗೋಪುರ ಕಾಣಿಸಿಕೊಂಡಿತು. ಎಷ್ಟು ದರ್ಪದಿಂದ ಆ ಶಿಲಾಪೀಠದ ಮೇಲೆ ನಿಂತಿದೆ ಗೋಪುರ! ಕೆಂಪೇಗೌಡನ ಗಡಿಯೆಂದು ನಾಲ್ಕು ದಿಕ್ಕುಗಳಲ್ಲಿಯೂ ಕಟ್ಟಿಸಿದ್ದಾನಂತೆ. ಇಂತಹ ಗೋಪುರಗಳನ್ನು ಬೆಂಗಳೂರನ್ನು ಕಟ್ಟಿಸಿದವನು ಇಮ್ಮಡಿ ಕೆಂಪೇಗೌಡ. ಗೌಡನ ಊರಿದು; ಕನ್ನಡದ ತೌರೂರು.

ಆ ಗೋಪುರದ ಬಳಿ ಕುದುರೆಯಮೇಲಿಹನು ಕಟ್ಟಾಳು! ತಲೆಯಲ್ಲಿ ಮುಂಡಾಸು. ಗಂಡುಗೆಜ್ಜೆ ಹಾಕಿದ್ದಾನೆ. ಪಕ್ಕದಲ್ಲಿ ಕತ್ತಿಯಿದೆ. ಕಡಿವಾಣವನ್ನು ಬಿಗಿಹಿಡಿದು ಕುದುರೆಯನ್ನು ನಿಲ್ಲಿಸಿ ಸುತ್ತಲೂ ನೋಡುತ್ತಿದ್ದಾನೆ. ಬೆಳಕು ಅವನ ಹಿಂಭಾಗದಲ್ಲಿರಲು ಅವನ ಆಕೃತಿಮಟ್ಟಿಗೆ ಕಾಣುತ್ತಿದೆ. ಪಾಳೆಯಗಾರರ ನಾಯಕನಂತೆ ಕಾಣಿಸುತ್ತಿರುವನು. ಅದೋ ಕುದುರೆಯನ್ನು ಇಳಿಸಿಕೊಂಡು ಈಕಡೆಗೆ ಬರುತ್ತಿದ್ದಾನೆ!

ಪಡವಣಕಡೆಯಿಂದ ಬಂದಿತು ಕಾಳಿಕಹಳೆಯ ನಾದ. ತಮಟೆಯ ಶಬ್ದ. 'ರಮ್, ರಮ್, ರಮ್' ರಣಡೋಲಿನ ರಣವಾದ್ಯ. ಗಂಡು ದನಿ! ಕನ್ನಡನಾಡಿನ ಜಯಘೋಷ! ನನಗೆ ಎಲ್ಲಿನೋಡಿದರೂ ಹಿಂದೂ ಸಿಪಾಯಿಗಳು ಅರವ ಅಲ್ಲವೇ ಹಿಂದೂಸ್ಥಾನೀ ಹಾಡುಗಳನ್ನು ಹಾಡುತ್ತಿದ್ದುದು ಕೇಳಿ ಕೇಳಿ ಬೇಜಾರಾಗಿತ್ತು. ಕನ್ನಡದಲ್ಲಿ ರಣಗೀತೆ ಹಾಡುತ್ತಾ ಸೈನಿಕರು ಬರುತ್ತಿದ್ದಾರೆ. ಪಂಜುಗಳನ್ನು ಹಿಡಿದಿದ್ದಾರೆ. ಹಗಲು ಬತ್ತಿ ಹಿಡಿದುಕೊಂಡು ಪಾರ್ಕಿನೊಳಕ್ಕೆ ಇಬ್ಬರು ಪ್ರವೇಶಿಸಿದರು. ಅವರ ಹಿಂದೆ ತುಂಬು ಗಾಂಭೀರ್ಯದಲ್ಲಿ ಹೆಜ್ಜೆಯಿಡುತ್ತಾ ಬರುತ್ತಿಹನು ದಳದ ನಾಯಕ! ಕತ್ತಿ ಗುರಾಣಿ ಹಿಡಿದಿಹನು. ಕೋವಿಯೂ ಬೆನ್ನೊಳಿದೆ.

ಕೆಂಪೇಗೌಡನ ಗೋಪುರದ ಕಡೆಯಿಂದ ಬಂದ ಪಾಳೇಗಾರರ ನಾಯಕನನ್ನು ಈ ದಳದ ನಾಯಕ ನೇರಳೇಮರದಡಿ ಎದರುಗೊಂಡ. "ಜಯಭುವನೇಶ್ವರಿ! ಜಯಚಾಮುಂಡಿ!" ಎಂಬ ಜಯಘೋಷ ಕೇಳಿಸಿತು. ಕನ್ನಡನಾಡಿನ ಆ ಜಯಘೋಷ!

ಮತ್ತೆ ಕುದುರೆಯ ಸಪ್ಪಳ ಕೇಳುತ್ತಿದೆ. ಇನ್ನೂ ಇಬ್ಬರು ರಾವುತರು ಪಾರ್ಕಿನಕಡೆಗೆ ಬಂದರು. ಕುದುರೆಗಳನ್ನು ಹೊಂಗೆಮರಕ್ಕೆ ಕಟ್ಟಿ ನಾಯಕರಿರುವೆಡೆಗೆ ತೆರಳಿದರು. ಅವರ ಕೈಯಲ್ಲಿಯೂ ಬಿಚ್ಚುಕತ್ತಿಯಿದೆ. ಗುರಾಣಿಗಳನ್ನು ಹಿಡಿದಿದ್ದಾರೆ. ನಾಯಕರಿಗೆ ಮಣಿದು ಏನೋ ಹೇಳುತ್ತಿದ್ದಾರೆ. ಮೊದಲುಬಂದ ನಾಯಕ ತನ್ನ ಕತ್ತಿಯನ್ನು ಹಿರಿದು ತೋರಿಸುತ್ತಿದ್ದಾನೆ. ಫಳ ಫಳ ಎಂದು ಹೊಳೆಯಿತು ಕತ್ತಿ. ಪಂಜುಗಳನ್ನು ಹಿಡಿದಿದ್ದವನು ಉರಿಯನ್ನು ದೊಡ್ಡದುಮಾಡಿದ. ಎಲ್ಲರೂ ರಕ್ತದೊಳು ತೋಯ್ದಿಹರು, ವೀರ ಯೋಧರು! ಏನೋ ಸಾಹಸದ ಕೆಲಸ ಮಾಡಿ ಇಲ್ಲಿಗೈತಂದಿರಬೇಕು. ಅವರ ಉಡುಪು ಶಸ್ತ್ರ ಎಲ್ಲವನ್ನೂ ನೋಡಿದರೆ ಹದಿನೇಳನೆ ಶತಮಾನಕ್ಕೆ ನಮ್ಮನ್ನು ಒಯ್ಯುತ್ತಿದೆ. ಚರಿತ್ರೆಯಲ್ಲಿ ಎಲ್ಲೋ ಓದಿದ್ದ ಜ್ಞಾಪಕ. ಇಮ್ಮಡಿ ಕೆಂಪೇಗೌಡ ಕಟ್ಟಿಸಿದ ಈ ಬೆಂಗಳೂರು ವೆಂಕಾಜಿಯ ಕೈಸೇರಿತ್ತು. ಆತನು ನೆಲಸಿದ್ದು ತಂಜಾವೂರಿನಲ್ಲಿ. ಮೈಸೂರೊಡೆಯರು ಬೆಂಗಳೂರನ್ನು ಮೂರುಲಕ್ಷರೂಪಾಯಿಗಳಿಗೆ

ಅವನಿಂದ ಕೊಂಡುಕೊಳ್ಳಲು ವ್ಯವಹಾರ ನಡೆಸುತ್ತಿದ್ದರು. ವ್ಯವಹಾರ ಇನ್ನೂ ಪೂರ್ತಿಯಾಗಿರಲಿಲ್ಲ. ನಾಡಿನ ಸ್ಥಿತಿ ಅಲ್ಲೋಲಕಲ್ಲೋಲವಾಗಿತ್ತು. ಕೆಂಪೇಗೌಡನ ನಾಯಕರು, ಹೊಸಕೋಟೆಯ ಪಾಳೆಯಗಾರರು, ಸರ್ಜಾಪುರದ ವೀರರು ಎಲ್ಲರೂ ಕಲೆತು ಈ ನಾಡನ್ನು ಮರಾಠರ ವಶದಿಂದ ತಪ್ಪಿಸಲು ಯತ್ನಿಸುತ್ತಿದ್ದರು. ಅಲ್ಲದೆ ಆ ಹೊತ್ತಿಗೆ ಅವರಂಗಜೇಬನ ಸೇನಾನಾಯಕ ಕಾಸಿಂಖಾನನು ಬೆಂಗಳೂರನ್ನು ಆಕ್ರಮಿಸಲು ಸೇನೆಯನ್ನು ತರುತ್ತಿದ್ದಾನೆ. ಈ ನಾಡು ಮೊಗಲರ ವಶವಾಗಬಾರದು. ಮರಾಠರ ವಶದಲ್ಲೂ ಇರಬಾರದು. ಅದರ ಸಲುವಾಗಿ ಈ ಪಾರ್ಕಿರುವ ಈ ಜಾಗದಲ್ಲಿಯೇ ಸುತ್ತುಮುತ್ತಲ ಪಾಳೆಯಗಾರರೆಲ್ಲರೂ ಕಲೆತು ಗೂಡಾಲೋಚನೆ ನಡೆಸುತ್ತಿದ್ದರೆಂದು.

ನನ್ನೆದುರಿಗೆ ಕಾಣುತ್ತಿರುವುದು ಅದೇ ದೃಶ್ಯ. ಅಗೋ ಎಲ್ಲರೂ ಈಕಡೆಗೆ ಬಂದರು. ಸೋಪಾನದಮೇಲೆ ಶಸ್ತ್ರ ವಸ್ತ್ರಭೂಷಣಗಳನ್ನು ತೆಗೆದಿಟ್ಟು ಸ್ನಾನಮಾಡಿದರು. ಮಹಾ ಕಾಳಿಯ ಸ್ತೋತ್ರಮಾಡಿದರು. ಮತ್ತೆ ಯಾರ ಬರುವಿಗೋ ಕಾಯುತ್ತಾ ಇರುವರು.

ಕೆರೆಯ ನೀರಿನಮೇಲೆ ಯಾರೋ ನಡೆದುಬರುವಂತೆ ಕೇಳಿಸಿತು. ಟಪ್ ಟಪ್ ಟಪ್ ಮರದ ಪಾದರಕ್ಷೆಯ ಶಬ್ದ. ಆತನ ಆಕೃತಿ ಕಾಣಿಸಿತು. ಗೋಸಾಯಿ! ಋಷಿಯಹಾಗೆ ಕಾಣುತ್ತಿದ್ದಾನೆ. ತೇಜೋಶಾಲಿಯಾಗಿದ್ದಾನೆ. ನಿಡಿದಾದ ಗಡ್ಡ, ಲಂಗೋಟಿಯ ವಿನಹ ಮೈಮೇಲೆ ಬೇರೆ ಬಟ್ಟೆಯಿಲ್ಲ. ಕೈಯಲ್ಲಿ ಕಮಂಡಲ. ಆತನು ನೆಲದಮೇಲೆ ಕಾಲಿಟ್ಟೊಡನೆಯೇ ಎಲ್ಲರೂ ಸಾಷ್ಟಾಂಗ ಪ್ರಣಾಮಮಾಡಿದರು. ಯಾರಿರಬಹುದು, ಆ ಋಷಿ? ಮಾಂಡವಮುನಿಯೇ? ಇದೇ ಜಾಗದಲ್ಲಿಯೇ ಮಾಂಡವಮುನಿ ವಾಸಿಸುತ್ತಿದ್ದಿದ್ದಂತೆ. ಹಲಸೂರು ದೇವಾಲಯದಲ್ಲಿರುವ ಈಶ್ವರನ ಲಿಂಗ ಆತನು ಪೂಜಿಸುತ್ತಿದ್ದುದು. ಅದು ಮರಳಿನಲ್ಲಿ ಮುಚ್ಚಿಹೋಗಿದ್ದಿತಂತೆ. ಇಮ್ಮಡಿ ಕೆಂಪೇಗೌಡ ಯಲಹಂಕದಲ್ಲಿ ಆಳುತ್ತಿದ್ದಾಗ, ಒಂದು ದಿನ ಬೇಟೆಗಾಗಿ ಬಂದು, ಸಾಕಾಗಿರಲು ಹೊಂಗೆಯಮರದಡಿ ಇದ್ದ ಮರಳಿನಮೇಲೆ ಪವಡಿಸಿದ. ಇಲ್ಲಿಗೆ ಬಂದಾಗ ಮಧ್ಯಾಹ್ನವಾಗಿತ್ತು. ಉರಿಬಿಸಲು. ನಿದ್ರೆಹತ್ತಿತ್ತು. ಕನಸಿನಲ್ಲಿ ಈಶ್ವರ

ಪ್ರತ್ಯಕ್ಷನಾಗಿ "ಮಾಂಡವ ಮುನಿ ಪೂಜಿಸುತ್ತಿದ್ದ ಲಿಂಗಮೂರ್ತಿ ನಿನ್ನಡಿ ಮರಳಿನಲ್ಲಿದೆ. ಅದನ್ನು ತೆಗೆದು ಇದೇ ಜಾಗದಲ್ಲಿ ದೇವಸ್ಥಾನ ವನ್ನು ಕಟ್ಟಿಸಿ ಪುನಃ ಪ್ರತಿಷ್ಠೆಮಾಡು" ಎಂದು ಹೇಳಿದನಂತೆ. ಇಮ್ಮಡಿ ಕೆಂಪೇಗೌಡನೇ ದೇವಾಲಯುವನ್ನು ಕಟ್ಟಿಸಿದವನು. ಇಲ್ಲಿ ಪೂಜೆ ಆರಾಧನೆ ಗಳನ್ನು ನಡಸಲು ಬ್ರಾಹ್ಮಣರಿಗೆ ಹಲಸೂರಿನ ಕೆರೆಯನ್ನು ಕಟ್ಟಿಸಿ ಅದರ ಹಿಂದಿನ ಜಮೀನುಗಳನ್ನು ಬಳವಳಿ ಕೊಟ್ಟನಂತೆ. ಈ ಪ್ರದೇಶದಲ್ಲಿ ಮಾಂಡವಮುನಿ ಈಗಲೂ ಸಂಚರಿಸುತ್ತಿರುವನಂತೆ. ರಾತ್ರಿ ದೇವಸ್ಥಾನ ದಲ್ಲಿ ಪೂಜೆ ಸಲ್ಲಿಸುವನಂತೆ. ಈಗ ಪಾರ್ಕಿಗೆ ದಯಮಾಡಿಸಿದ ಪುಣ್ಯ ಪುರುಷ ಮಾಂಡವಮುನಿಯೇ? ಈ ನಾಯಕರು ಈತನಿಗೆ ಮಣಿಯುತ್ತಿ ದ್ದಾರೆ. ಈತ ಆಶೀರ್ವದಿಸುತ್ತಿದ್ದಾನೆ. ಎಲ್ಲರೂ ನೇರಳೆಯ ಮರದಡಿಗೆ ತೆರಳಿದರು. ಮುನಿವರ್ಯ ಶಿಲಾಸನದಮೇಲೆ ಮಂಡಿಸಿದ. ಸುತ್ತಲೂ ಯೋಧರು ವೀರಮಂಡಿ ಹಾಕಿಕೊಂಡು ಕುಳಿತರು. ಅವರು ತಾವು ಎಸಗಿದ್ದ ಕಾರ್ಯಗಳನ್ನೆಲ್ಲಾ ಬಿತ್ತರಿಸುತ್ತಿರುವರು. ಕತ್ತಿಗಳನ್ನು ಒರೆ ಯಿಂದ ತೆಗೆದು ತೋರಿಸುತ್ತಿರುವರು. ವೀರಾವೇಶದಲ್ಲಿ ನಡದ ಸಂಗತಿ ಗಳನ್ನು ವರ್ಣಿಸುತ್ತಿರುವರು. ಕೆಲವೆಡೆ ಮೊಗಲಸೈನ್ಯವನ್ನು ತಡಗಟ್ಟಿರ ಬೇಕು. ಸೈನ್ಯಕ್ಕೆ ಆಹಾರಸಾಮಗ್ರಿ ದೊರಕದಹಾಗೆ ಮಾಡಿರಬೇಕು. ಮುನಿಯು ಎಲ್ಲವನ್ನು ಆಲಿಸಿ ಅವರಿಗೆ ಮುಂದಿನ ಕಾರ್ಯನೀತಿ ಹೇಳು ತ್ತಿದ್ದಾನೆ. ಬೆಂಗಳೂರು ಮತ್ತೆ ಕನ್ನಡಿಗರ ವಶವಾಗುವುದೆಂದು ಕನ್ನಡ ನಾಡಿನ ಧ್ವಜ ಪುನಃ ಬೆಂಗಳೂರಿನ ಕೋಟೆಯಮೇಲೆ ಹಾರುವುದೆಂದು ಹೇಳುತ್ತಿದ್ದಾನೆ. ಸಾವಕಾಶಪಡಬೇಡಿರೆಂದೂ ಎಚ್ಚರಿಕೆಯಿಂದ ವರ್ತಿಸ ಬೇಕೆಂದೂ ಹೇಳುತ್ತಿದ್ದಾನೆ. ಅದೋ ಮತ್ತೆ ಮತ್ತೆ ಎಚ್ಚರಿಕೆ ಕೊಡು ತ್ತಿದಾನೆ. ಅದೋ ಈರ್ವರು ಗೂಢಚಾರರು ಅಲ್ಲಿಗೆ ಬಂದರು. ಪಿಸು ಮಾತಿನಲ್ಲಿ ಏನನ್ನೊ ಹೇಳುತ್ತಿದ್ದಾರೆ. ಮುನಿಯು ಎದ್ದು ಎಲ್ಲರಿಗೂ ಏನನ್ನೊ ಹೇಳಿ, ಆ ಜಾಗದಿಂದ ಬಿಟ್ಟು ತೆರಳಲು ತಿಳಿಸಿದ. ತಾನೂ ನೀರಿನಮೇಲೆ ಹೇಗೆಬಂದನೋ ಹಾಗೆಯೇ ನಡೆದುಕೊಂಡು ಹೋಗು ತ್ತಿದ್ದಾನೆ. ಎಲ್ಲರೂ ಅವನನ್ನು ಬೀಳ್ಕೊಟ್ಟು ತಮ್ಮ ತಮ್ಮ ಸ್ವಸ್ಥಾನ ಗಳಿಗೆ ಹೊರಡಲು ಅನುವಾದರು. ಮುನೀಶ್ವರ ದುಡಕಬೇಡವೆಂದು

ಹೇಳಿರಬೇಕು. ಮತ್ತೆ ಏನೋ ಎಲ್ಲರೂ ಅಲ್ಲಿಯೇ ನಿಂತರು. ಅವರಲ್ಲೇ ಮಾತೂಕತೆಗಿಟ್ಟಿಕೊಂಡಿದೆ. ಏನೋ ತಿಸಿರ ಹತ್ತುಕೊಂಡಿರಬೇಕು. ಮುನಿಯಮಾತಿನಂತೆ ಎಲ್ಲರೂ ತೆರಳಲಿಲ್ಲ. ವಾದವಿವಾದನಡೆಸುತ್ತಿದ್ದಾರೆ. ಏನು ಅನಾಹುತ ನಡೆದುಬಿಡುವುದೋ ಎನ್ನಿಸಿತು ಎನಗೆ. ಸ್ವಲ್ಪಹೊತ್ತಿನಲ್ಲೇ ಇದ್ದಕ್ಕಿದ್ದಹಾಗೆ ಸಿಡಿಲೆರಗಿದ ಶಬ್ದವಾಯಿತು. ಬೆಂಕಿ! ನೇರಳೆ ಮರದಡಿ ಬೆಂಕಿ! ಅಲ್ಲಿದ್ದವರೆಲ್ಲರೂ ಭಸ್ಮವಾಗುತ್ತಿದ್ದಂತೆ ತೋರಿತು. ಬೆಂಕಿಯ ನಾಲಿಗೆ ನೇರಳೆಮರದ ಕೊಂಬೆಗಳವರಿಗೆ ಚಾಚಿತು. ನೇರಳೆ ಮರದ ಮೇಲಿನಿಂದ ಯಾರೋ ಬೆಂಕಿಯೊಳಕ್ಕೆ ಉರುಳಿದರು. ಮರದ ಮೇಲೆ ಮೊಗಲರ ಕಡೆಯ ಗೂಢಚಾರನಿದ್ದನೇ? ಬೆಂಕಿಗೆ ಆತನೇ ಕಾರಣ? ಆ ದೃಶ್ಯವನ್ನು ನೋಡಿ, ನನ್ನ ಮೈಯಲ್ಲಿ ನಡುಕ ಹುಟ್ಟಿತು, ಕಣ್ಣುಗಳು ಮುಚ್ಚಿಹೋದವು. ಹುಲ್ಲಿನಮೇಲೆ ಹಾಗೆ ಒರಗಿಬಿಟ್ಟೆ.

ನನಗೆ ಎಚ್ಚರವಾದಾಗ ಸರಿರಾತ್ರಿ. ಮೋಡಗಳೊಂದೂ ಆಗಸದಲ್ಲಿಲ್ಲ. ಬೆಳದಿಂಗಳು ಹರಡಿದೆ. ಚಂದಿರ ಪಶ್ಚಿಮದಕಡೆಗೆ ತಿರುಗಿದಾನೆ. ನೇರಳೆಮರದಕಡೆಗೆ ಹೋಗಲು ಧೈರ್ಯಸಾಲದು. ಇನ್ನೊಂದು ಮಾರ್ಗವನ್ನು ಹಿಡಿದು ಮನೆಯಕಡೆಗೆ ನಡೆದೆ. ಅಬ್ಬಾ ಆ ದೃಶ್ಯ! ಪ್ರತಿವರ್ಷವೂ ಈದಿನ ಈ ಪ್ರಕರಣ ಪಾರ್ಕಿನಲ್ಲಿ ನಡೆಯುತ್ತಿರಬೇಕು. ಈ ವೀರರ ಆತ್ಮಗಳು ಯಾವಾಗಲೂ ಇಲ್ಲಿ ಸುಳಿಯುತ್ತಿರುತ್ತವೆಂದು ಕಾಣುತ್ತೆ. ಈದಿನ ಇಲ್ಲಿ ಕಾಣಿಸಿಕೊಳ್ಳುವವೇನೋ. ಈ ವೀರರ ಆತ್ಮಗಳು ಇಲ್ಲಿ ಸುಳಿಯುತ್ತಿರುವುದರಿಂದಲೇ ಪಾರ್ಕಿಗೆ ಬಂದವರಿಗೆಲ್ಲಾ ಕೆಚ್ಚು ಕೆರಳಿತ್ತಿರುವುದು.

ಮನೆಗೆ ಹೋಗುವಾಗ, ದಾರಿಯುದ್ದಕ್ಕೂ ಬೆಂಗಳೂರಿನ ಚರಿತ್ರೆಯನ್ನೇ ನೆನೆಯುತ್ತಾ ಹೋದೆ. ಮೊಗಲರ ಸೈನ್ಯವೇನೋ ಬೆಂಗಳೂರನ್ನು ಮುತ್ತಿತು. ತಡೆಗಟ್ಟಲು ಯಾರೂ ಇಲ್ಲವಾಗಿತ್ತು. ಊರು ಸುಲಭವಾಗಿ ಅವರ ಕೈಸೇರಿತು. ಆದರೆ ನಾಲ್ಕು ದಿನಗಳಿಗಿಂತ ಹೆಚ್ಚಾಗಿ ಅಲ್ಲಿ ಮೊಗಲರ ಧ್ವಜ ಹಾರಲಿಲ್ಲ. ಮೈಸೂರೊಡೆಯರು ವೆಂಕಾಜಿಗೆ ಕೊಡಬೇಕೆಂದಿದ್ದ ಹಣವನ್ನು ಮೊಗಲರ ಸೇನಾನಾಯಕ ಕಾಸೀಂ ಖಾನನಿಗೇ ಕೊಟ್ಟು ಬೆಂಗಳೂರನ್ನು ವಶಪಡಿಸಿಕೊಂಡರು. ಮೈಸೂರಿನ

ಸೇನೆ ಬೆಂಗಳೂರನ್ನು ಆಕ್ರಮಿಸಿ ಕರ್ನಾಟಕದ ಬಾವುಟವನ್ನು ಬೆಂಗಳೂರಿನ ಕೋಟೆಯಮೇಲೆ ನೆಟ್ಟಿತು.

ರಾತ್ರಿ ನಾನು ಮನೆಗೆ ಹಿಂತಿರುಗುವವರೆಗೂ ನನ್ನ ಸಹಧರ್ಮಿಣಿ ಎದ್ದೇ ಇದ್ದಳು, ನನಗಾಗಿ ಕಾದಿದ್ದಳು. ನನ್ನ ಚಿಕ್ಕ ತಮ್ಮನೂ ಮನೆಯ ವರಾಂಡದಲ್ಲಿ ಓದುತ್ತಾ ಕುಳಿತಿದ್ದ. ನಾನು ಬಂದೊಡನೇ ಅವನು ತನ್ನ ಕೊಠಡಿಗೆ ಹೋಗಿ ಮಲಗಿಕೊಂಡ. ನಾನೂ ಊಟ ಮಾಡುವುದಿಲ್ಲವೆಂದು ಹೇಳಿ ಮಂಚದಮೇಲೆ ಬಿದ್ದುಕೊಂಡೆ. ಆದಿನ ಹೊತ್ತಾಗಿ ಊಟವಾಗಿದ್ದುದರಿಂದ ಆಕೆಯೂ ಊಟಮಾಡದೇ ಹಾಗೇ ಪವಡಿಸಿದಳು. ನಾನು ಅವಳಿಗೆ ಪಾರ್ಕಿನಲ್ಲಿ ಕಂಡ ದೃಶ್ಯವನ್ನೆಲ್ಲಾ ಬಿತ್ತರಿಸಿದೆ. ಎಲ್ಲವನ್ನೂ ಕೇಳಿದಮೇಲೆ ಆಕೆ ಇನ್ನು ಬೆಳಗಿನ ಜಾವವಾಯಿತು ಸ್ವಲ್ಪಹೊತ್ತಾದರೂ ನಿದ್ರೆಮಾಡೋಣ ಮಲಗಿಕೊಳ್ಳಿ ಎಂದು ಹೇಳಿ ತಾನೂ ನಿದ್ರಿಸಿಬಿಟ್ಟಳು.

ಬೆಳಿಗ್ಗೆ ನಾನು ಎದ್ದಾಗ ಆಗಲೇ ಏಳು ಗಂಟೆಯಾಗಿತ್ತು. ಟವಲನ್ನೂ ಹಲ್ಲುಪುಡಿಯನ್ನೂ ಹಿಡಿದು ಬಚ್ಚಲಮನೆಯಕಡೆಗೆ ಹೊರಟೆ. ಊಟದ ಮನೆಯಲ್ಲಿ ಆಕೆ ನನ್ನ ತಮ್ಮಂದಿರಿಗೆ ಕಾಫಿ ಹಂಚುತ್ತಿದ್ದಳು. ನನ್ನ ಕಿರಿಯ ತಮ್ಮ "ರಾತ್ರಿ ಗೋಪಣ್ಣ ಯಾತಕ್ಕೆ ಅಷ್ಟು ಹೊತ್ತು ಮಾಡಿಕೊಂಡು ಬಂದ. ಏನದು ಸಂಗತಿಯನ್ನು ಬಿತ್ತರಿಸುತ್ತಿದ್ದಿದ್ದು ?" ಎಂದು ಕೇಳುತ್ತಿದ್ದ. ಅದಕ್ಕೆ ಆಕೆ "ನಿನ್ನೆ ಸಂಜೆ ಆ....ಅವರ ಪಾರ್ಕಿದೆಯಲ್ಲಾ ದಂಡಿನ ಕೊನೆಯಲ್ಲಿ ಅಲ್ಲಿಗೆ ಹೋಗಿದ್ದರು ಹಬ್ಬದ ಊಟ ಮಾಡಿದ್ದರು ಹಾಗೆ ಅಲ್ಲಿ ವಿರಾಮಿಸಿಕೊಂಡಿದ್ದರೆಂದು ಕಾಣುತ್ತೆ. ನಿನ್ನೆ ಕಾಮನ ಹುಣ್ಣಿಮೆತಾನೆ ಹುಡುಗರು ಕುಣಿದಾಡಿ ಅಲ್ಲಿ ಕಾಮನನ್ನು ಸುಟ್ಟರೆಂದು ಕಾಣುತ್ತೆ. ಅದನ್ನು ಅವರು ನೋಡಿದ್ದಾರೆ. ಕವಿಗಳು ಕತೆಗಾರರು ಏನೋ ನೋಡುತಾರೆ ಏನೇನೋ ನೋಡಿದೆನೆಂದು ಭಾವಿಸಿಕೊಳ್ಳುತ್ತಾರೆ" ಎಂದು ಹೇಳುತ್ತಿದ್ದಳು. ನನ್ನ ತಮ್ಮ "ಏನು ನೋಡಿದರೆಂದು ಹೇಳಿದರು" ಎಂದು ಕೇಳಿದ. "ಏನೋ ಒಂದು ವಿಚಿತ್ರ, ನಿನ್ನ ಪರೀಕ್ಷೆಗೆ ನೀನು ಡಾರ್ಕ್ಷಿಕ್ಸೋಟು ಕತೆ ಓದುತ್ತಿದ್ದೀಯಲ್ಲಾ ಅದರಲ್ಲಿರುವ ಒಂದು ಸಂಗತಿ" ಎಂದಳು.

ನಾನು ಈ ಸಂಗತಿಯನ್ನು ನನ್ನ ಸ್ನೇಹಿತರಿಗೆಲ್ಲಾ ಅರುಹ ಬೇಕೆಂದಿದ್ದೆ. ಅವಳ ಮಾತನ್ನು ಕೇಳಿ ನಾಚಿಕೆಯಾಯಿತು. ಸುಮ್ಮನೆ ಹಿತ್ತಿಲ ಕಡೆಗೆ ನಡೆದುಬಿಟ್ಟೆ.

ಮಾಲಿ ಯಾತಕ್ಕೆ ನನ್ನನ್ನು ಅಲ್ಲಿರಬೇಡವೆಂದು ಎಚ್ಚರಿಸಿದ? ಹುಡುಗರು ಎಲ್ಲಿಬಂದು ನನಗೆ ಗುಲಾಲು ಸುರಿದು ಬಟ್ಟೆಯನ್ನು ಕೆಡಿಸಿ ಬಿಟ್ಟಾರೆಂದಿರಬಹುದು. ಕೊಂಗ ಹುಡುಗರು ಅಲ್ಲಿರುವವರು. ಅಂತೂ ಪಾರ್ಕಿನೊಳು ಹುಣ್ಣಿಮೆ ಒಳ್ಳೆ ಕಾಳಹುಣ್ಣಿಮೆ ಆಯಿತು; ಕಾಮನ ಹುಣ್ಣಿಮೆಯದಿನ.

# ಸ್ವಾತಂತ್ರ್ಯವು ಈ ನಾಡಿಗೆ ಇದ್ದಿರೆ!

(ಕೆನ್‌ಸಿಂಗ್‌ಟನ್ ಪಾರ್ಕಿನಲ್ಲಿ ಕುಳಿತಿದ್ದಾಗ ತೋರಿದ ಒಂದು ಭಾವನಾಚಿತ್ರ)

ಇಂದು ಸಂಜೆ ಈ ಬನದಲಿ ಕುಳಿತಿರೆ
ಭಾವನೆ ಹೊಮ್ಮಿತ್ತು
ಸ್ವಾತಂತ್ರ್ಯವು ಈ ನಾಡಿಗೆ ಇದ್ದಿರೆ
ಬನವೆಂತಿರುತಿತ್ತು

ಇಲ್ಲಿನ ಗಿಡ ಮರ ಕೆರೆ ಸೋಪಾನ
ಹೇಗೆ ಕಾಣುತಿತ್ತು
ಇಲ್ಲಿಗೆ ಬರುವಾ ಜನರ ನಡೆನುಡಿ
ಏನಾಗಿರುತಿತ್ತು

ಅಂದಿನ ಆವರಣದ ಆ ದೃಶ್ಯವು
ಮನದಿ ಮೂಡುತಿತ್ತು
ಅಂತೆಯೆ ರಾಗದ ಲಹರಿಯು ತಾನೇ
ಮನದೊಳಗೆದ್ದಿತ್ತು

* * *

ಕೆಂಪೇಗೌಡನ ಗಡಿಗೋಪುರವು
ಬನದೆಡೆ ನಿಂತಿರಲು
ಕೆನ್‌ಸಿಂಗ್‌ಟನ್ ಪಾರ್ಕ್ ಹೆಸರಿನ ಬದಲು
ಬಳಕೆಯೊಳಾ ಹೆಸರು

ಬನಕೆ ಆಸರೆ ಹಲಸೂರಿನ ಕೆರೆ
ತಿಳಿಗೊಳದಂತಿಹುದು
ಹಲಸೂರಿನ ಕೆರೆ ಕನ್ನಡ ಹೆಸರಿದು
ಎನಿತು ಮಧುರ ನುಡಿಯು

ಬನಕ್ಕೆತರುವಾ ಜನರ ನುಡಿಯೊಳೂ
ಸಕ್ಕದ ಕನ್ನಡವು
ಪರಕೀಯರು ಅದೊ ನುಡಿವರು ಕನ್ನಡ
ಬನ ಕನ್ನಡಮಯವು

ಜನರ ಉಡುಗೆಯಲಿ ಕನ್ನಡ ಸಂಸ್ಕೃತಿ
ಕರುನಾಡಾಭರಣ
ಸ್ವಾತಂತ್ರ್ಯವು ತಂದಿದೆ ಆತ್ಮೀಯತೆ
ಕಾಣದು ಅನುಕರಣ

ಕರುನಾಡಿನ ಗಿಡ ಬಳ್ಳಿಗಳಿಲ್ಲಿವೆ
ಕ್ರೋಟನುಗಳು ಅಲ್ಲ
ಕಂಪನು ಸೂಸುವ ಚಂಪಕ ಪಾದರಿ
ಹೊನ್ನೆಯು ಬನವೆಲ್ಲ

ನೆರಳ ಜೊತೆಗೆ ಫಲ ಕೊಡುವ ಮರಗಳೇ
ಬೆರತಿದೆ ಶ್ರೀಗಂಧ
ತಳಿರನು ತಳಿದಿಹ ಮಾವು ಅಶೋಕ
ನೋಡಲು ಬಲು ಚಂದ

ಮಲ್ಲಿಗೆ ಮಾಧವಿ ಜಾಜೀ ಲತೆಗಳ
ಚಪ್ಪರ ಕಲ್ಮಂಚ
ಅರಳೀ ಮರದಡಿ ಜಗಲಿಯು ಸುತ್ತಲು
ನಾಗರ ಕಲ್ಪಂತಿ

ಅಲ್ಲಿ ಇರುವರೂ ನವ ಕೋಮಲೆಯರು
ಅರ್ಚನೆ ಗೈದಿಹರು
ಪತಿಯ ಜೊತೆಗೆ ವಿಹಾರಕೆ ಹೊರಟರೂ
ಬಕುತಿಯು ಎಳೆದಿಹುದು

ಹೊಂಗೆಯ ಮರದಡಿ ಹೂವಿನ ಹಾಸಿಗೆ
ಕೆಂಪು ಬಿಳಿಪು ಊದಾ
ತಂಗಿಹರದರಡಿ ಹಿರಿಯರು ಕಿರಿಯರು
ತಾಯ ಮಡಲು ನೋಡಾ

ನೇಸರಿಳಿಯುತಿರೆ ಗಂಡಸರೂ ಅದೊ
ಸೋಪಾನವನಿಳಿದು
ಸಂಧ್ಯಾವಂದನೆ ಜಪ ತಪ ಗೈವರು
ನೇಮಿಷ್ಠರು ಅಹುದು

ಮಹಮದ್ದೀಯರು ವಸ್ತ್ರವ ಹಾಸಿ
ಮೊಳಕಾಲನು ಊರಿ
ಪ್ರಾರ್ಥನೆಯಲಿ ಮೈಮರೆತಿಹರಿಲ್ಲಿ
ಭೇದ ಭಾವ ದೂಡಿ

ಹೊರಗಿನವರು ಈ ನಾಡಿಗೈತರಲು
ಇಲ್ಲಿನ ನಡೆನುಡಿಗೆ
ಮಾರು ಹೋಗಿಹರು ಈ ಸಂಸ್ಕೃತಿಗೆ
ಸ್ವಾತಂತ್ರ್ಯದ ಹಿರಿಮೆ

* * *

ಇಂಥಾ ಸ್ಥಳದೊಳು ಏರಿಯ ಬುಡದೊಳು
ಗುಡಿಯೊಂದಿರುತಿತ್ತು
ಗುಡಿಯು ಮಸೀದಿಯು ಕ್ರಿಸ್ತರ ಚರ್ಚು
ಬನದೆಡೆ ಇರುತಿತ್ತು

ಈ ಬನದೀಗುಡಿಯೈಸಿರಿಯನುದಿನ
ವೃದ್ಧಿ ಹೊಂದುತಿತ್ತು
ಗುಡಿಯ ಆಶ್ರಯದಿ ವಿದ್ಯಾ ಸಂಸ್ಥೆಯು
ಬೆಳೆದು ಬರುತಲಿತ್ತು

ಮೂರು ವೇದಗಳು ಶಾಸ್ತ್ರ ಪುರಾಣಗ
ಳಿಲ್ಲಿ ಮೊಳಗುತಿತ್ತು।
ಸಾಹಿತ್ಯದ ವ್ಯಾಸಂಗವು ಅನುದಿನ
ವಿಲ್ಲಿ ಜರುಗುತಿತ್ತು
ಕಾಲನಿಯಮಕನುಸಾರವಾಗಿ ವಿ
ಜ್ಞಾನ ಬೆರೆಯುತಿತ್ತು
ರಾಜಕೀಯ ವಿಚಾರವಿನಿಮಯವು
ಇಲ್ಲೆ ಆಗುತಿತ್ತು
ಭರತ ನಾಟ್ಯದ ತವರ್‌ಮನೆ ದೇಗುಲ
ಮೇಳ ನಡೆಯುತಿತ್ತು
ವಿಹಾರದೊಂದಿಗೆ ವಿಚಾರದಾಲಯ
ವಿದು ಆಗಿರುತಿತ್ತು

* * *

ಏನಿದು ಸಂಭ್ರಮವೀದಿನ ಗುಡಿಯಲಿ
ಜನ ಕಿಕ್ಕಿರಿದಿಹುದು
ತಾಳ ಮೇಳ ಮದ್ದಲೆ ಕಹಳೆ
ಭೋರ್ಗರೆಯುತ್ತಿಹುದು
ಎಲ್ಲಾ ಕಡೆಯಿಂದಿಲ್ಲಿಗೆ ಬರುತಿದೆ
ಭಜನಾಕೂಟಗಳು
ಮಂಗಳ ದ್ರವ್ಯಗಳೊಂದಿಗೆ ಹೆಂಗಳು
ತರುತಿಹರೊಸಗೆಗಳು
ಹಿರಿಯರು ಕಿರಿಯರು ಬಡವರು ಧನಿಕರು
ಎಲ್ಲರು ಒಂದಾಗಿ
ಒಟ್ಟೊಟ್ಟಿಗೆ ದೇಗುಲದಲಿ ಬೆರೆತರು
ಹರಿಯ ಸೇವೆಗಾಗಿ

ವಿದ್ಯಾವಂತರು ಪರಿಚಾರಕರೂ
ಬ್ರಾಹ್ಮಣ ಹರಿಜನರೂ
ದೇವನ ಸನ್ನಿಧಿಯಲ್ಲವರೆಲ್ಲರು
ಒಂದೇ ಮನೆಯವರು

ಹಿಂದೂ ದೇಶದೊಳಾಗಿದೆ ಕ್ರಾಂತಿ
ಮತ ಭೇದವು ಅಳಿಯೆ
ನಾಡಿನ ಉನ್ನತಿಯೆಲ್ಲರ ಗುರಿಯು
ಅಭಿಮಾನವು ಬೆಳೆಯೆ

ಕನ್ನಡನಾಡಿಗೆ ಅರಸನು ಒಬ್ಬ
ಕನ್ನಡಿಗರು ಒಂದು
ಒಂದೇ ಬಾವುಟ ಹಾರುವುದಿಲ್ಲಿ
ನಾಡಧ್ವಜವು ಇಂದು

* * *

ಗಜೇಂದ್ರ ಮೋಕ್ಷದ ಉತ್ಸವವಂತೆ
ಶುಭದಿನವಿಂದಂತೆ
ಅದರಿಂದೀಪರಿ ಗುಡಿಯೊಳು ಬನದೊಳು
ನೆರೆದಿದೆ ಜನಸಂತೆ

ನಾಡಿನ ಜನರೊಳು ಸ್ವಾತಂತ್ರ್ಯವು ಇರೆ
ಹಬ್ಬದೊಳುತ್ಸಾಹ
ನಾಡೇ ನೆರೆವುದು ಕೇಳಿಯು ನಡೆವುದು
ಹೊಮ್ಮುವುದುಲ್ಲಾಸ

ಮಂಗಳವೆಸಗಿದೆ ಕೆರೆಯಂಗಳದೊಳು
ಅಲ್ಲಿನ ದ್ವೀಪದೊಳು
ವಿದ್ಯುತ್‌ದೀಪದ ಬೆಳಕಿನ ರಾಶಿ
ಚೆಲ್ಲಿದೆ ಎಲ್ಲೆಲ್ಲು

ವಿವಿಧ ವರ್ಣದಾ ಸೊಡರಿನ ಗೊಂಚಲು
ಮರಗಳೊಳೆಸೆಯುವವು
ಮತಾಪು ಮರಗಳು ಬಾಣಾ ಬಿರಿಸಿನ
ಕಾಂತಿಯ ಸುರಿಸುವವು

ತಾರಾಮಂಡಲವಾಗಸದಲ್ಲಿ
ಬಿಂಬಿಸೆ ಜಲದಲ್ಲಿ
ಇಂದ್ರಜಾಲದಾ ಪಟ್ಟಣವಾಗಿದೆ
ಇಂದೀಬನವಿಲ್ಲಿ

* * *

ಸೊಂಡಿಲನೆತ್ತಿದ ಸಲಗರಾಯನಾ
ಪ್ರತಿಮೆಯು ನೀರಲ್ಲಿ
ಅದರ ಕಾಲನು ಹಿಡಿದಂತಿರುವಾ
ಮೊಸಳೆ ಪ್ರತಿಮೆಯಲ್ಲಿ

* * *

ಗಜೇಂದ್ರ ಮೋಕ್ಷದ ಕತೆಯರುತಿಹರಿ
ಮದಿಸಿದ ಕರಿರಾಜ
ನೀರ ಮಡುವಿನಲಿ ಕಾಲನ್ನಿಡಲು
ಹಿಡಿಯಿತು ಮೊಸಳೆಯದ

ಸಲಗರಾಯನಿಗೆ ಮೊಸಳೆ ಜೋಡಿಯೆ
ನಡೆಸಿದ ಹೋರಾಟ
ಗರ್ವವು ತುಂಬಿರೆ ಕರಿರಾಯನಿಗೆ
ನಡೆಯಿತು ಸೆಣೆದಾಟ

ಮೊಸಳೆಯ ಕೈ ಮೇಲಾಯಿತು ಉಕ್ಕಿತು
ದುಗುಡ ಕರಿಯೊಳಾಗ
**ನಾನೇ** ಎನ್ನುವ ಮೋಹದ ಪರದೆಯು
ಸಡಿಲವಾಯಿತಾಗ

ಅನುತಾಪವು ಆನಂದಕೆ ಹಾದಿಯು
ಮುಕುತಿಗೆ ಸಾಧನವು
ಅಂತರಂಗದ ಶುದ್ಧಿಯಾಗಲು
ಆತ್ಮದ ಉನ್ನತಿಯು

ಆಗೈತಂದನು ಶ್ರೀಹರಿ ಮೊಸಳೆಯ
ಬಂಧನ ಬಿಡಿಸಿದನು
ಮುಕುತಿ ದೊರೆಯಿತು ಕರಿರಾಜನಿಗೆ
ಪ್ರಿಯವಾಯ್ತೀ ಕತೆಯು

ದೇಗುಲವಿರುವೆಡೆ ಆಚರಿಪರು ಆ-
ದರ್ಶದ ಕತೆಯೆಂದು
ಮನುಜಗು ಜನತೆಗು ಅನ್ವಯಿಸುವುದು
ನೀತಿ ತೋರ್ಪುದೆಂದು

ಮನುಜನ ಮನವೂ ಮದಿಸಿತು ಎನಲು
ಕರಣಗಳಾಯಿತು ಮೊಸಳೆ
ಅನುತಾಪವು ಉದ್ಭವಿಸಲು ಮುಕುತಿಯು
ಮನುಜಗೆ ಕರಿಯಂತೆ

ಒಂದು ನಾಡು ಆಮೋದಕೆ ಸಿಲುಕಲು
ದಾಸ್ಯದ ಸಂಕೋಲೆ
ಬಂಧಿಸುವುದು ಆದರಿಂ ಬಿಡುಗಡೆ
ಅಳಿದರೆ ಆ ಮೊಸಳೆ

ಸ್ವಾತಂತ್ರ್ಯದ ಸಂಕೇತವ ತಿಳಿಪುದು
ಜನರಿಗೆ ಈ ಕತೆಯು
ಎಚ್ಚರಗೊಳಿಸುತ್ತಿರುವುದು ಜನತೆಯ
ನಡೆಯಲು ಉತ್ಸವವು

*　　*　　*

ಕವಿತಾಲಹರಿಯು ನಿಂತಿತು ಇಲ್ಲಿಗೆ
ಎಚ್ಚರವಾಯ್ತೆನಗೆ
ಇಂದಿನ ಪರಿಸ್ಥಿತಿ ಎದುರೊಳು ಕಂಡಿತು
ಕತ್ತಲು ಬನದೊಳಗೆ

ಮೋಡದ ತೆರೆಯನು ಸರಿಯಿಸಿ ಬಾರ
ಚಂದಿರ ಓ ಬಾರ
ವಿಭೂತಿಯಂದದಿ ಇಳೆಗೈತಾರ
ಅಭಯವ ನೀ ತೋರ

ಕತ್ತಲ ದೂಡುತ ಕಾಲಿಡುವಳು ಉಷೆ
ರವಿಯ ಬರವು ದಿಟವು
ಎಚ್ಚೆತ್ತಿರುವೀ ನಾಡಿಗೆ ಮುಕುತಿಯು
ಉಂಟು ಎಂದು ಉಸಿರು

# ಇಂದಿನ ಕೆನ್‌ಸಿಂಗ್‌ಟನ್ ಪಾರ್ಕ್

ಕೆಲವು ದಿನಗಳ ಹಿಂದೆ ಕೆನ್‌ಸಿಂಗ್‌ಟನ್ ಪಾರ್ಕಿಗೆ ಹೋಗಿದ್ದೆ. ಈಚೆಗೆ ಕೆನ್‌ಸಿಂಗ್‌ಟನ್ ಪಾರ್ಕೂ ನನ್ನ ಜೀವನದಿಂದ ದೂರವಾಗುತ್ತಿದೆ. ಇದಕ್ಕೆ ಕಾರಣ ನನ್ನ ಇಂದಿನ ಮನಸ್ಥಿತಿ. ಅದರ ಬದಲಾವಣೆಗೆ ಕಾರಣ ನನ್ನ ಸಂಸಾರದಲ್ಲಿನ ಬದಲಾವಣೆ. ಅಲ್ಲದೆ ಯುದ್ಧದ ವಾತಾವರಣ. ಈ ಎರಡು ವರುಷಗಳಲ್ಲಿ ನನ್ನ ಸಂಸಾರದಲ್ಲಿ ಬಹಳ ಬದಲಾವಣೆಗಳಾದವು. ಗೃಹಿಣಿ ಬದಲಾಯಿಸಿದಳು. ಗೃಹವು ಬದಲಾಯಿಸಿತು. ಆದಾಯ ವೆಚ್ಚಗಳಲ್ಲಿ ಬದಲಾವಣೆ. ಆಫೀಸು ಮುಗಿದೊಡನೆಯೇ ಮನೆಯಕಡೆ ಯೋಚನೆ. ರಜದ ದಿನಗಳು ಬಂದಿತೆಂದರೆ ಹಳ್ಳಿಯಕಡೆ ಯೋಚನೆ. ಮನೆಯಲ್ಲಿ ಮುಂಜಿ, ಮದುವೆ, ಹೆಂಗಸರ ಹೆರಿಗೆ ಬಾಣಂತನ. ಇದ್ದ ತಂಗಿ ತೀರಿಕೊಂಡಿದ್ದರಿಂದ ತಬ್ಬಲಿಯಾದ ಎಳೇ ಮಕ್ಕಳ ಪೋಷಣೆ. ಇದು ಸಂಸಾರ! ಹಳ್ಳಿಯ ಸುತ್ತಲೂ ಸೈನಿಕರ ಬಿಡಾರಗಳಿರುವುದರಿಂದ ತೋಟಗಳು ಹಾಳುಬಿದ್ದವು. ಸಿಪಾಯಿಗಳಿಗೆ ಹೆದರಿಕೊಂಡು ಹೆಣ್ಣಾಳುಗಳು ತೋಟದಲ್ಲಿ ಕೆಲಸಮಾಡರು. ಬತ್ತ ಬೆಳೆಯಲು ಕೆಸರುಗದ್ದೆ ಮಾಡಿಸಿದರೆ ಸೈನಿಕರಿಗೆ ಸೊಳ್ಳೆಕಾಟವಂತೆ! ಹೊರಗೆ "ಗ್ರೋ ಮೋರ್ ಫುಡ್" ಎಂದು ಸರಕಾರದ ಪ್ರಚಾರ ನಡೆಯುತ್ತಿದ್ದರೆ ನಮ್ಮ ಹಳ್ಳಿಯಲ್ಲಿ "ಡೋಂಟ್ ಗ್ರೋ ಯುವರ್ ಫುಡ್" ಎಂದು ಕಟ್ಟಾಜ್ಞೆ. ಅಂತೂ ಇಂತೂ ಏನಾದರೂ ಮಾಡಿ ಹೇಗಾದರೂ ನಾಲ್ಕು ರಾಗಿಕಾಳುಗಳನ್ನು ಬೆಳೆಯಬೇಕು. ಇಲ್ಲದಿದ್ದರೆ ನನ್ನ ಮತ್ತು ನನ್ನನ್ನೇ ನಂಬಿರುವ ಇತರರ ಜೀವನ ನಡೆಯುವುದು ಹೇಗೆ? ಸರಕಾರದವರು ಕೊಡುತ್ತಿರುವ ಸಂಬಳ ಯಾವ ಮೂಲೆಗೆ? ಪುಸ್ತಕಗಳಿಂದ ಹಣಸಂಪಾದಿಸಲು ನಾನು ಹೆಸರುಗೊಂಡ ಸಾಹಿತಿಯೂ ಅಲ್ಲ; ಪಠ್ಯ ಪುಸ್ತಕಗಳನ್ನು ಬರೆದು ನಾಲ್ಕಾರು ಜನರನ್ನು ಆಶ್ರಯಿಸಿ ಹಣ ಗಳಿಸುವ ಯೋಗ್ಯತೆಯೂ ನನ್ನಲ್ಲಿಲ್ಲ. ನಮ್ಮನ್ನು ಸಲುಹುತ್ತಿರುವವಳು ಧರಣಿದೇವಿ. ಹೊಟ್ಟೆಗೆ ಹಿಟ್ಟು ಹಾಕುತ್ತಿರುವವಳು ಅವಳು. ಆದರೆ ಯುದ್ಧ ಬಂದಿತು. ಅವಳೂ ತಲ್ಲಣಿಸುತ್ತಿದ್ದಾಳೆ; ನಾನೂ ತಲ್ಲಣಿಸುತ್ತಿದ್ದೇನೆ. ಅದರಿಂದ ಹಿಂದಿನ ಹಾಗೆ

ಪ್ರತಿನಿತ್ಯವೂ ಪಾರ್ಕಿಗೆ ಹೋಗಬರಲು ಬಿಡುವಿಲ್ಲದಂತಾಗಿದೆ. ಅಲ್ಲದೆ ಯುದ್ಧದ ಪರಿಣಾಮದಿಂದ ಪಾರ್ಕಿನ ವಾತಾವರಣವೂ ಬದಲಾಯಿಸಿದೆ.

ಈಗ ಪಾರ್ಕು ಹಿಂದಿನ ಪಾರ್ಕಾಗಿಲ್ಲ. ಮುನಿಸಿಪಾಲಿಟಿಯವರಿಗೆ ಸೈನಿಕರ ವಸತಿ ಸರಿಯಾಗಿ ನೋಡಿಕೊಳ್ಳಬೇಕಾಗಿರುವುದರಿಂದಲೋ ಏನೋ ಅವರು ಈ ಪಾರ್ಕಿನ ಪೋಷಣೆಯ ಕಡೆಗೆ ಹೆಚ್ಚಾಗಿ ಗಮನ ಕೊಟ್ಟಂತಿಲ್ಲ. ಗಿಡಗಳು ಒಣಗುತ್ತಿವೆ; ಅವಕ್ಕೆ ಸರಿಯಾಗಿ ಪಾತಿಮಾಡಿ ನೀರೆರೆಯುವವರಿಲ್ಲ. ಲತೆಗಳು ಪೊದೆಯಾಗಿ ಬೃಹದಾಕೃತಿಯನ್ನು ತಾಳುತ್ತಿವೆ; ಅವುಗಳನ್ನು ಕತ್ತರಿಸಿ ಪಾಗುಮಾಡುವವರಿಲ್ಲ. ಕೆರೆಯಲ್ಲಿ ನೀರು ಬತ್ತುತ್ತಿದೆ; ಅದಕ್ಕೆ ನೀರೊದಗಿಸುತಿದ್ದ ರಹಗಳನ್ನು ಸರಿಪಡಿಸುವವರಿಲ್ಲ. ಕೆರೆಯೊಳಗೆಲ್ಲಾ ಜೊಂಡುಹುಲ್ಲಿನ ಪ್ರತಾಪ ಹೆಚ್ಚುತ್ತಿದೆ; ಅದನ್ನು ಕಿತ್ತು ಹಾಕುವವರಿಲ್ಲ. ಪರಂಗಿಮುಳ್ಳು ಕೆರೆಯ ದಂಡೆಯನ್ನೆಲ್ಲಾ ಆವರಿಸುತ್ತಿದೆ; ಐರೋಪ್ಯರು ಏಷ್ಯಾಖಂಡವನ್ನೆಲ್ಲಾ ಆಕ್ರಮಿಸಿ ತಳವೂರುತ್ತಿರುವಂತೆ. ಅದರ ತಲೆಯಮೇಲೆ ಮೆಟ್ಟಿ ಬುಡಮುಟ್ಟ ಕಿತ್ತುಹಾಕುವವರಿಲ್ಲದಂತಾಗಿದೆ.

ಇನ್ನು ಈ ಪಾರ್ಕಿಗೆ ಬರುತ್ತಿದ್ದ ಆ ಹಿಂದಿನ ಪರಿಚಿತ ವ್ಯಕ್ತಿಗಳೆಲ್ಲಿ! ಆ ಕ್ರಿಶ್ಚಿಯನ್ ಪಾದ್ರಿಗಳು, ಮೌಲಾನಸಾಹೇಬರು, ರಾಮಕೃಷ್ಣ ಮಠದವರೂ ಏನಾದರು! ನಮ್ಮ ಮಾರೈನ್ ಇಂಜಿನಿಯರ್ ಮಿಡಲ್‌ಟನ್ ಎಲ್ಲಿಗೆ ಹೋದ! ಹಿಂದಿನ ಪರಿಚಿತ ವ್ಯಕ್ತಿಗಳಾರೂ ಈಗ ಅಲ್ಲಿ ಕಾಣಿಸರು. ಆ ಸೇಟುಸಾಹೇಬ ಅವನ ಹೆಂಡತಿ ಅಲ್ಲಿ ಈಗ ಸುಳಿಯರು. ಆಂಗ್ಲ ಯುವತಿಯರ, ಮಕ್ಕಳ ತಂಡ ಕಾಣಿಸದು. ನೌಕಾ ಕ್ರೀಡನಕ್ಕಾಗಿ ಬರುತ್ತಿದ್ದ ಆ ಕಾಶ್ಮೀರ ದಂಪತಿಗಳೂ ಇಲ್ಲ. ಸಂಜೆ ಪಾರ್ಕಿನಲ್ಲಿ ಆಂಗ್ಲ ಸಿಪಾಯಿಗಳೂ ಅವರ ಬೆನ್ನ ಹತ್ತಿರುವ ಆಂಗ್ಲೋ ಇಂಡಿಯನ್ ಹೆಂಗಸರು. ದೋಣಿಗಳಲ್ಲಿ ಕಪ್ಪು ಸೈನಿಕರ ತಂಡ; ದೋಣಿ ನಡೆಯಿಸುವುದನ್ನು ಕಲಿಯುವುದಕ್ಕೆ. ಕಾಶ್ಮೀರ ದಂಪತಿಗಳ ದೋಣಿಯ ಹಾಡಿನ ಬದಲು ಈಗ ಕೇಳಿಸುವುದು "ಐಸ, ಐಸ" ಎಂಬ ಏಕನಾದ. ಪಾರ್ಕಿನಲ್ಲಿ ಕೂತಾಗ ದೇಗುಲದ ನಾಗಸ್ವರದ ಇಂಚರವಾಗಲಿ, ಚರ್ಚಿನ ಗಂಟಾಘೋಷವಾಗಲಿ, ಕಾನ್ವೆಂಟಿನ ತರುಣಿಯರ ಪಲ್ಲವಿಯ ದನಿಯಾಗಲಿ ಕೇಳಿಸದು. ಪಾರ್ಕಿನ ಸುತ್ತಲೂ ಇರುವ ರಸ್ತೆಗಳಲ್ಲಿ ಸೈನಿಕರ ಪಡೆಯ ಓಡಾಟ. ಬೂಡ್ಸುಕಾಲಿನ ಸಪ್ಪಳ.

ಲಾರಿಗಳ ಗಡಗಡ ಶಬ್ದ. ರಣಡೋಲಿನ ರಂ ರಂ ರಣಘೋಷ. ಶಾಂತಿ ಇಳೆಯಿಂದ ಜಾರಿಬಿಟ್ಟಿದ್ದಾಳೆ! ಆ ಕಲ್ಲು ಗುಡ್ಡದ ಮೇಲಿರುವ ಕೆಂಪೇ ಗೌಡನ ಶಿಖರದಬಳಿ ಕೆಂಪೇಗೌಡನ ಆತ್ಮಮಟ್ಟಿಗೆ ನಿಂತಿದೆ; ಕೆರಳಿದೆ!

ಇಷ್ಟಿದ್ದರೂ ರಾತ್ರಿ ಎಂಟುಗಂಟೆಗೆ ಪಾರ್ಕಿನಲ್ಲಿ ಪ್ರಕೃತಿ ಸೌಮ್ಯ ರೂಪನ್ನು ತಾಳುತ್ತಾಳೆ. ಎಲ್ಲೆಲ್ಲಿಯೂ ಮೌನವಾರಿಸುವುದು. ಇದ್ದ ನೀರಿ ನಲ್ಲಿಯೇ ತಾರೆಗಳು ಪ್ರತಿಬಿಂಬಿಸುವವು. ಕೆರೆಯೊಳಗಿನ ದ್ವೀಪಗಳು ಚೆಲುವು ತಾಳುವುವು. ಸೈನಿಕರೆಲ್ಲರೂ ಮಾಯವಾಗುವರು. ನನ್ನ ಗೆಳೆಯ ರಾದ ನರಸಿಂಹಾಚಾರ್ಯರನ್ನು ಕಾಣಬಯಸಿದಾಗ ನಾನು ಅಲ್ಲಿಗೆ ಆ ಹೊತ್ತಿಗೆ ಹೋಗುತ್ತೇನೆ. ಅವರಿಗಾಗಿ ಕಾಯುತ್ತಾ ಕುಳಿತಿರುತ್ತೇನೆ. ಅವರು ಅಲ್ಲಿಗೆ ಬಂದಮೇಲೆ ರಾತ್ರಿ ಹತ್ತು ಹನ್ನೊಂದು ಗಂಟೆಯುವರಿಗೂ ಮಾತನಾಡುತ್ತಾ ಕುಳಿತಿರುತ್ತೇವೆ. ಕನ್ನಡ ಸಾಹಿತಿಗಳ ಪೈಕಿ ನನ್ನ ಜೀವನಕ್ಕೆ ಹೆಚ್ಚಾಗಿ ಹೊಂದಿಕೊಂಡಿರುವವರು ಆ ಪುರೋಹಿತ ತಿರು ನಾರಾಯಣ ನರಸಿಂಹಾಚಾರ್ಯರು. ಅವರು ಕನ್ನಡ ಕವಿಗಳು; ಉದ್ದಾಮ ಪಂಡಿತರು. ಅವರ ಹಿರಿಯರೆಲ್ಲರೂ ಆಚಾರ್ಯಪುರುಷರು. ನನ್ನ ವಂಶದ ಮೂಲಪುರುಷರಾದರೋ ಮಹರಾಷ್ಟ್ರದ ಕಡೆಯಿಂದ ಇಲ್ಲಿಗೆ ಬಂದು ಯಲಹಂಕದ ಪಾಳೆಯಗಾರರ ಆಸ್ಥಾನದಲ್ಲಿ ಮಂತ್ರಿ ಗಳಾಗಿ ನೆಲೆಸಿದವರು. ಅವರ ಮೂಲಪುರುಷರು ರಾಮಾನುಜಾ ಚಾರ್ಯರೊಡನೆ ಕನ್ನಡ ದೇಶಕ್ಕೆ ಬಂದು ಮೇಲುಕೋಟೆಯಲ್ಲಿ ನೆಲಸಿ ವೈದಿಕ ಧರ್ಮವನ್ನು ಕಾಪಾಡಿಕೊಂಡು ಬಂದವರು. ನಾನು ಶುದ್ಧ ಲೌಕಿಕ, ಅವರು ವೈದಿಕರು. ನರಸಿಂಹಾಚಾರ್ಯರ ತಲೆಮಾರಿನವರಿಗೆ ಅವರ ಹಿಂದಿನವರು ಶ್ರೀರ್ಮ ತಿರುನಾರಾಯಣನ ಹೊರತು ಯಾರ ಮುಂದೆಯೂ ಕೈಜೋಡಿಸಿದವರಲ್ಲ; ಯಾರಿಗೂ ತಲೆಬಾಗಿಸಿದವರಲ್ಲ. ಕೈನೀಡಿ ಆಶೀರ್ವಾದ ಮಾಡುತ್ತಿದ್ದವರು. ಇಂದು ನಾನು ಸರಕಾರದ ಒಂದು ಇಲಾಖೆಯಲ್ಲಿ ನೌಖರಿಗೆ ಸೇರಿಕೊಂಡಿದ್ದೇನೆ. ಆವರು ಸೈನ್ಯದ ಇಲಾಖೆಯಲ್ಲಿ ಆಫೀಸಿನ ಮ್ಯಾನೇಜರಾಗಿದ್ದಾರೆ. ಯಾತಕ್ಕೆ ನಮ್ಮ ಅವಸ್ಥೆ ಹೀಗಾಯಿತು? ವಿದ್ಯೆಯಲ್ಲಾಗಲಿ ಬುದ್ಧಿಯಲ್ಲಾಗಲಿ ನಾವು ನಮ್ಮ ಹಿಂದಿನವರಿಗಿಂತ ಕಡಮೆಯೇ! ಹೀಗಾಗಲು ಕಾರಣ—

ಇಂದಿನ ಕಾಲಧರ್ಮ. ವಂಶಪರಂಪರೆಯಾಗಿ ಬಂದ ಅವರ ಪಾಂಡಿತ್ಯಕ್ಕೆ ಇಂದಿಗೂ ಚ್ಯುತಿ ಬಂದಿಲ್ಲ. ಅದರ ಸವಿಯನ್ನು ನಾನು ಅವರ ಸಹವಾಸದಲ್ಲಿರುವಾಗಲೆಲ್ಲಾ ಅನುಭವಿಸಿರುತ್ತೇನೆ. ಪಾರ್ಕಿನಲ್ಲಿ ಕೆರೆಯ ದಂಡೆಯಮೇಲೆ ಕುಳಿತು ರಾಮಾಯಣ ಮಹಾಭಾರತದ, ಕಾಳಿದಾಸ ಮತ್ತು ಇತರ ಸಂಸ್ಕೃತ ಸಾಹಿತಿಗಳ ಕಾವ್ಯಪರಿಚಯಮಾಡಿಕೊಳ್ಳುತ್ತಾ ವಿಮರ್ಶನಾ ವ್ಯಾಖ್ಯಾನಗಳಲ್ಲಿ ಇರುಳನ್ನೆಲ್ಲಾ ಕಳೆದಿದ್ದೇವೆ. ನನಗೆ ಅವರು ಸಾಹಿತ್ಯದ ತನಿರಸವನ್ನಿತ್ತರೆ ನಾನು ಲೋಕದ ವ್ಯವಹಾರದ ಖಾರದ ತಿಂಡಿ ತಿನಿಸುಗಳನ್ನು ಅವರ ಮುಂದಿಡುತ್ತೇನೆ. ನಮ್ಮಿಬ್ಬರ ಕೂಟ ಸವಿಯೂಟವೆಂದು ಅವರು ಅನ್ನುತ್ತಿರುತ್ತಾರೆ. ವಾರಕ್ಕೆ ಒಮ್ಮೆ ಅಥವ ಎರಡು ಸಲವಾದರೂ ಒಬ್ಬರನ್ನೊಬ್ಬರು ಕಾಣದಿದ್ದರೆ ಮನಸ್ಸು ಇರದು. ಆದರೆ ನನ್ನ ಮನೆ ಬೆಂಗಳೂರಿನ ದಕ್ಷಿಣದ ಕೊನೆಯಲ್ಲಿ; ಅವರ ಮನೆ ಬೆಂಗಳೂರಿನ ಉತ್ತರದ ಕೊನೆಯಲ್ಲಿ. ಬೆಂಗಳೂರನ್ನು ಕಟ್ಟಿಸಿದ ಕೆಂಪೇಗೌಡನು ಬೆಂಗಳೂರಿನ ಗಡಿಯೆಂದು ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಗೋಪುರಗಳನ್ನು ಕಟ್ಟಿಸಿದ್ದಾನೆ. ಒಂದು ಲಾಲ್‌ಬಾಗಿನ ಕಲ್ಲುಬಂಡೆಯಮೇಲಿದೆ. ಎರಡನೆಯದು ಗವೀಪುರದ ಕೆಂಪಾಂಬುಧಿ ಕೆರೆಯ ಬಳಿಯಿದೆ. ಮೂರನೆಯದು ಹಲಸೂರಿನ ಕೆರೆಯ ಏರಿಯ ಮೇಲಿದೆ. ನಾಲ್ಕನೆಯದು ಹೆಬ್ಬಾಳದ ರಸ್ತೆಯಲ್ಲಿ ವೈಯಾಳಿ ಶಿಖರದಲ್ಲಿದೆ. ನನ್ನ ಮನೆಯಿರುವುದು, ಲಾಲ್‌ಬಾಗಿನ ಆಚೆ. ನರಸಿಂಹಾಚಾರ್ಯರ ಮನೆ ವೈಯಾಳಿಶಿಖರದ ಗೋಪುರದ ಆಚೆ. ಆದರಿಂದಲೇ ನಾವು ಈ ಹಲಸೂರಿನ ಕೆರೆಯಬಳಿ ಇರುವ ಕೆನ್‌ಸಿಂಗ್‌ಟನ್ ಪಾರ್ಕಿನಲ್ಲಿ ಸೇರುವುದೆಂದು ಗೊತ್ತುಮಾಡಿಕೊಂಡಿರುವುದು. ಕೆಂಪೇಗೌಡನು ಕಟ್ಟಿಸಿರುವ ಇನ್ನೊಂದು ಗೋಪುರದಬಳಿ! ನಮ್ಮ ಮನೆಗೂ ಅವರ ಮನೆಗೂ ಅದೇ ಮಧ್ಯ ರಾಷ್ಟ್ರ. ಅಲ್ಲದೆ ಪಾರ್ಕೂ ನಮ್ಮಿಬ್ಬರನ್ನೂ ಒಲಿಸಿರುವ ಉದ್ಯಾನ.

ಈ ಯುದ್ಧದ ಕಾಲದಲ್ಲಿ ಕಚೇರಿಯನ್ನು ಈರ್ವರೂ ಜಾಗ್ರತೆ ಬಿಡಲು ಆಗದು. ಒಂದು ವೇಳೆ ನಾನು ಜಾಗ್ರತೆ ಕಚೇರಿಯ ಕೆಲಸವನ್ನು ಮುಗಿಸಿಕೊಂಡು ಅಲ್ಲಿಗೆ ಬಂದರೂ ಆತ ಜಾಗ್ರತೆ ಅಲ್ಲಿಗೆ ಬರಲು ಸಾಧ್ಯವಿಲ್ಲದಂತಾಗಿದೆ. ಹಗಲೂ ಇರುಳೂ ಆತ ಫೈಲುಗಳ ರಾಸಿಯ ನಡುವೆ

ವ್ಯವಹಾರ ನಡೆಸಬೇಕಾಗಿದೆ. ಅದರ ಮಧ್ಯದಲ್ಲಿಯೇ ಕುಳಿತು ಉತ್ತಮವಾದ ಕಾವ್ಯಗಳನ್ನು ಬರೆದು ಕನ್ನಡಸರಸತಿಗೆ ಅರ್ಪಿಸಿದ್ದಾರೆ. ಅವರ ಆ ಅವಸ್ಥಾವಿಶೇಷವನ್ನು ಕಂಡಾಗಲೆಲ್ಲಾ ಫ್ರೆಂಚರ ಸಾಹಿತಿ ಮೋಪಾಸಾಂತನ ಜೀವನಚಿತ್ರ ನೆನಪಿಗೆ ಬರುತ್ತದೆ. ಮೋಪಾಸಾಂತನೂ ಅವರಂತೆ ಮ್ಯಾರೈನ್ ಆಫೀಸೊಂದರ ಗುಮಾಸ್ತೆಯಾಗಿದ್ದವನು. ಅವನ ಉತ್ತಮ ಕೃತಿಗಳೆಲ್ಲವೂ ಆ ಕಚೇರಿಯಲ್ಲಿ ಕೆಲಸಮಾಡುತ್ತಿದ್ದಾಗಲೇ ಬರೆದವು ; ಕಚೇರಿಯ ಕೆಲಸದೊಂದಿಗೇ ಬರೆದವು. ಅವನು ಕತೆಗಳನ್ನು ಬರೆಯಲು ಸರಕಾರಿ ಕಾಗದಗಳನ್ನು ಉಪಯೋಗಿಸುತ್ತಿದ್ದನೆಂದು ಅವನ ಮೇಲೆ ಆಪಾದನೆ ಹೊರಿಸಿ ದಂಡಿಸಿದ್ದೂ ಉಂಟು. ಆದರೆ ನರಸಿಂಹಾಚಾರ್ಯರು ಅಂತಹ ಆಕ್ಷೇಪಣೆಗೆ ಗುರಿಯಾಗಿಲ್ಲ. ಅವರ ಸಾಹೇಬರಾದ ಸೇನಾನಾಯಕರು ಅವರ ಕೃತಿಗಳಿಗಾಗಿ ಅವರನ್ನು ಗೌರವಿಸಿದ್ದಾರೆ. ಒಂದುಸಲ ನರಸಿಂಹಾಚಾರ್ಯರು ಯಾವುದೋ ಒಂದು ಬಹು ಮುಖ್ಯವಾದ ಫೈಲನ್ನು ನೋಡುತ್ತಿದ್ದರಂತೆ. ಮನ ಫೈಲಿನ ಯೋಚನೆಯಲ್ಲಿ ಮುಳುಗಿದೆ. ಹಾಗೆಯೇ ಫೈಲಿನ ವಿಚಾರವನ್ನೇ ಚಿಂತಿಸುತ್ತಾ ಕುರ್ಚಿಗೆ ಒರಗಿ ಕುಳಿತಿದ್ದಾರೆ. ದೃಷ್ಟಿ ಕಿಟಕಿಯ ಕಡೆಗೆ ಹೊರಳಿತು. ಹೊರಗಡೆ ಒಂದು ವಿಶಾಲ ವೃಕ್ಷ. ಅದರ ನೆರಳು ಸುತ್ತಲೂ ಪಸರಿಸಿದೆ. ಸೂರ್ಯನ ಕಿರಣಗಳು ಮರದ ತಳಿರೊಂದಿಗೆ ನರ್ತಿಸುತ್ತಿದೆ. ಕವಿಹೃದಯ ತೆರೆಯಿತು, ಕಾವ್ಯಲಹರಿ ಹರಿಯಿತು. ಆ ಫೈಲನ್ನು ಒತ್ತಟ್ಟಿಗಿಟ್ಟು ಕವನವೊಂದನ್ನು ಬರೆಯಲಾರಂಭಿಸಿದರು. ಆ ಫೈಲಿಗಾಗಿ ಸೇನಾನಾಯಕರು ಕಾದಿದ್ದರು. ಎಷ್ಟು ಹೊತ್ತಾದರೂ ಫೈಲು ಹಿಂತಿರುಗಿ ಬರದೇ ಇದ್ದುದರಿಂದ ತಾವೇ ನರಸಿಂಹಾಚಾರ್ಯರಿದ್ದಲ್ಲಿಗೆ ಬಂದರು. ಅಲ್ಲಿ ಬಂದು ನೋಡುತ್ತಾರೆ, ನರಸಿಂಹಾಚಾರ್ಯರು ಕಾವ್ಯರಚನೆಯಲ್ಲಿ ನಿರತರಾಗಿದ್ದಾರೆ. ಅವರನ್ನು ಯಾರೂ ಎಚ್ಚರಗೊಳಿಸಕೂಡದೆಂದು ಹೇಳಿ ಸೇನಾನಾಯಕರು ಹೊರಟು ಹೋದರಂತೆ. ಕವನವು ಪೂರೈಸಿದಮೇಲೆ ಎರಡುನಿಮಿಷಗಳಲ್ಲಿ ಆ ಫೈಲನ್ನು ಸಿದ್ಧಗೊಳಿಸಿ ನರಸಿಂಹಾಚಾರ್ಯರು ಹೊರಟುಬಂದರಂತೆ. ಕಾವ್ಯರಮಣಿಯೊಂದಿಗೆ ಅವರಷ್ಟು ರಮಿಸುತ್ತಿದ್ದರೂ ಕೈಹಿಡಿದ ಕಚೇರಿಯ ಕೆಲಸವನ್ನು ಅವರು ಅಲಕ್ಷಿಸಿಲ್ಲ. ಕಚೇರಿಯ ಕೆಲಸದಲ್ಲಿ

ದಕ್ಷರೆಂದೆನಿಸಿಕೊಂಡಿದ್ದಾರೆ. ಸೇನಾನಾಯಕರಿಗೆ ಅವರು ಬಲಭುಜ ಆಗಿದ್ದಾರೆಂದು ಇತರ ಅಧಿಕಾರಿಗಳು ಹೇಳಿರುವುದನ್ನು ನಾನು ಕೇಳಿದ್ದೇನೆ. ಕಚೇರಿಯ ಕೆಲಸವೆಲ್ಲವೂ ಸಮರ್ಪಕವಾಗಿ ಆಗುವವರಿಗೂ ಅವರು ಕಚೇರಿಯನ್ನು ಬಿಟ್ಟು ಹೊರಕ್ಕೆ ಕಾಲಿಡರು. ಎಷ್ಟೋಸಲ ನಾನವರಿಗಾಗಿ ಪಾರ್ಕಿನಲ್ಲಿ ಕಾದಿದ್ದು ನಿರಾಶನಾಗಿ ಹಿಂತಿರುಗಿದ್ದೇನೆ.

ಕೆಲವು ದಿನಗಳ ಹಿಂದೆಯೂ ಅವರಿಗಾಗಿ ಪಾರ್ಕಿಗೆ ಹೋಗಿ ಕಾದಿದ್ದೆ. ಸಂಜೆ ಸರಿದು ಇರುಳು ಮೂಡಿದ್ದರಿಂದ ಪಾರ್ಕು ನಿರ್ಜನವಾಗಿತ್ತು. ಮೌನ ಆವರಿಸಿತ್ತು. ಗೆಳೆಯನ ಬರುವಿಗಾಗಿ ಕಾಯುತ್ತಾ ಕುಳಿತಿದ್ದೇನೆ. ಯುದ್ಧ ಹರಿದು ಶಾಂತಿಯ ಬರುವಿಗಾಗಿ ಇಳೆಯು ಕಾದುಕೊಂಡಿರುವಂತೆ! ಎಂಟು ಗಂಟೆಯಾಯಿತು, ಒಂಬತ್ತಾಯಿತು, ಹತ್ತಿರದಲ್ಲಿದ್ದ ಸೈನಿಕರ ಬಿಡಾರದಲ್ಲಿ ಬ್ಯೂಗಲ್ ಊದಿದ ಶಬ್ದ ಕೇಳಿಸಿತು, ನರಸಿಂಹಾಚಾರ್ಯರಿನ್ನೂ ಬಂದಿಲ್ಲ. ಮನೆಗೆ ಹಿಂತಿರುಗೋಣವೇ ಎಂದು ಯೋಚಿಸುತ್ತಿದೆ. ನಾನು ಕುಳಿತಿದ್ದೆಡೆಗೆ ಯಾರೋ ನಡೆದು ಬಂದಂತಾಯಿತು. ಹಿಂತಿರುಗಿ ನೋಡಿದೆ. ಆಂಗ್ಲ ತರುಣಿ! ಯೌವನದಲ್ಲಿ ಬಳುಕುತ್ತಿದ್ದಾಳೆ. ಓರ್ವಳೇ ಇದ್ದಾಳೆ. ನನಗೆ ಆಶ್ಚರ್ಯವಾಯಿತು. ನೇರಾಗಿ ನಾನಿದ್ದಲ್ಲಿಗೇ ಬಂದಳು. ಅವಳಿಗೆ ನನ್ನಿಂದ ಏನಾಗಬೇಕಾಗಿದೆ!

"ಗುಡ್ ನೈಟ್ ಮಿಸ್ಟರ್ ರಾವ್" ಎಂದಳು.

"ಗುಡ್ ನೈಟ್" ಎಂದೆ.

"ನನ್ನ ಗುರುತು ತಮಗೆ ಸಿಕ್ಕಲಿಲ್ಲವೇ" ಎಂದು ಇಂಗ್ಲೀಷಿನಲ್ಲಿ ಕೇಳಿದಳು. ಇಂಗ್ಲೀಷಲ್ಲದೆ ಕನ್ನಡ ಅವಳಿಗೆಲ್ಲಿ ಬರುವುದು!

"ಇಲ್ಲ" ಎಂದೆ.

"ತಮ್ಮನ್ನು ನೋಡಿದೊಡನೆಯೇ ತಮ್ಮ ಗುರುತು ನನಗೆ ಸಿಕ್ಕಿತು. ತಾವು ಅಂದಿಗೂ ಇಂದಿಗೂ ಏನೂ ಬದಲಾಯಿಸಿಲ್ಲ. ಅದೇ ಕ್ಲೋಜ್ ಕಾಲರ್ ಕೋಟು, ಅದೇ ಕರಿಯ ಗಾಂಧಿಟೋಪಿ" ಎಂದಳು.

ಚೆನ್ನಾಯಿತು ಇವಳೇನಾದರೂ ಗೂಢಚಾರಳೋ! ರಾತ್ರಿಯ ಹೊತ್ತಿನಲ್ಲಿ ನಾನೂ ನರಸಿಂಹಾಚಾರ್ಯರೂ ಅಲ್ಲಿಗೆ ಬಂದು ಕುಳಿತು ಮಾತನಾಡುವುದನ್ನು ಕಂಡು ಪಿತೂರಿ ಮಾಡುತ್ತಿರುವೆವೆಂದು ಭಾವಿಸಿ

ನನ್ನನ್ನು ಪ್ರಶ್ನಿಸಲು ಬಂದಿರುವಳೋ! ನನ್ನನ್ನೇನು ಮೋಹಿಸಿ ಬಂದಿಲ್ಲ ತಾನೆ. ನನ್ನನ್ನಾಗಲಿ,ನರಸಿಂಹಾಚಾರ್ಯರನ್ನಾಗಲೀ ಯಾರು ಮೋಹಿಸಿ ಬಂದಾರು !

"ನಾನು ತಮ್ಮನ್ನು ಯಾವಾಗ ಕಂಡಿದ್ದು ?" ಎಂದು ಪ್ರಶ್ನಿಸಿದೆ.

"ಇದೇನು ಹೀಗೆ ಕೇಳುವಿರಿ ? ನಾನು ಯಾರೋ ದೂರದವಳಂತೆ ಮಾತನಾಡಿಸುತ್ತಿದ್ದೀರಲ್ಲಾ! ಚೆನ್ನಾಯಿತು. ನನ್ನನ್ನಾವಾಗಲೇ ಮರೆತು ಬಿಟ್ಟಿರಾ?" ಎಂದಳು.

ಸರಿಹೋಯಿತು. ಏನಿಷ್ಟು ಸಲಿಗೆಯಿಂದ ಮಾತನಾಡುವುದಕ್ಕೆ ಯತ್ನಿಸಿದಳಲ್ಲಾ ಎಂದುಕೊಂಡೆ.

"ಕ್ಷಮಿಸಬೇಕು, ಇಲ್ಲ ಖಂಡಿತವಾಗಿಯೂ ತಮ್ಮ ಗುರುತು ನನಗೆ ಸಿಗಲಿಲ್ಲ" ಎಂದೆ.

"ನಾನು ಬೆಟ್ಸಿ ಅಲ್ಲವೇ ?" ಎಂದಳು.

"ಯಾವ ಬೆಟ್ಸಿ ?" ಎಂದು ಕೇಳಿದೆ.

"ಬೆಟ್ಸಿಮೇಸ್‌ಫೀಲ್ಡ್.ಆಚಾರ್ಯರ ಅಂಗಡಿಯನ್ನು ಮರೆತಿರಾ?" ಎಂದಳು.

ನೆನಪಿಗೆ ಬಂತು. ಆಚಾರ್ಯನೆಂದರೆ ನಮ್ಮ ನರಸಿಂಹಾಚಾರ್ಯರಲ್ಲ. ರಾಜಗೋಪಾಲಾಚಾರ್ಯ. ಹೈಸ್ಕೂಲಿನಲ್ಲಿ ನನ್ನ ಸಹಪಾಠಿಯಾಗಿದ್ದ. ನಾನು ಕಾಲೇಜಿಗೆ ಓದಲು ಸೇರಿದೆ; ಆತ ಸೌತ್‌ಪೆರೇಡಿನಲ್ಲಿ ಅಂಗಡಿಯೊಂದನ್ನು ತೆರದ. ಅಲ್ಲಿ ವ್ಯಾಪಾರಮಾಡಲು ತನ್ನ ಸಹಾಯಕ್ಕೆ ಬೆಟ್ಸಿ ಮೇಸ್‌ಫೀಲ್ಡ್ ಎಂಬ ಒಬ್ಬ ಹುಡುಗಿಯನ್ನು ನೇಮಿಸಿಕೊಂಡಿದ್ದ. ನಾನು ಆಗಾಗ ಅವನ ಅಂಗಡಿಗೆ ಹೋಗಿ ಬರುತ್ತಿದ್ದೆ. ಆ ಹುಡುಗಿ ವೆನ್‌ಸನ್ ಕಂಪನಿಗೆ ಹೋಗಿ ನಮಗೆ ಸ್ವೀಟ್ಸ್ ತಂದುಕೊಡುತ್ತಿದ್ದಳು. ಆಚಾರ್ಯನ ದುಡ್ಡಿನಲ್ಲಿ ಒಂದು ಪೊಟ್ಟಣ ತಂದರೆ ತನ್ನ ದುಡ್ಡಿನಲ್ಲಿ ನನಗಾಗಿ ಇನ್ನೊಂದು ಪೊಟ್ಟಣ ತರುತ್ತಿದ್ದಳು. ನನಗೆ ಆಗ ನಟ್ಸ್-ಚಾಕೋಲೇಟಿನ ಮೇಲೆ ಆಸೆಯಿತ್ತು. ಅದನ್ನು ಅವಳು ಅರಿತಿದ್ದಳು. ಬೇಡವೆಂದರೂ ತನ್ನ ದುಡ್ಡಿನಲ್ಲಿ ನನಗೆ ಯಾವಾಗಲೂ ನಟ್ಸ್-ಚಾಕೋಲೇಟಿನ ಪೊಟ್ಟಣವನ್ನು ತಂದೀವಳು.

"ಅವನ ಕಾಗದದಿಂದ ನೀನು ಹರುಷಗೊಳ್ಳಬೇಕು. ಅದುಬಿಟ್ಟು ನೀನೇಕೆ ಅಳುತ್ತಿದ್ದಿ?" ಎಂದು ಬೆಟ್ಸಿಯನ್ನು ಕೇಳಿದೆವು.

ಬೆಟ್ಸಿ ಹೇಳಿದಳು "ಅವನಾರೋ ನನಗೆ ಗೊತ್ತಿಲ್ಲ. ಇಲ್ಲಿಯವರಿಗೆ ನಾನು ಯಾವ ಹುಡುಗನನ್ನೂ ಪ್ರೀತಿಸಿಲ್ಲ. ಒಬ್ಬರಲ್ಲಿಯೂ ಏಕಾಂತ ವಾಗಿ ಮಾತನಾಡಿಲ್ಲ. ಅವನ ಕಾಗದ ಕಂಡು ನನಗೆ ಹೆದರಿಕೆ ಆಗು ತ್ತಿದೆ" ಎಂದಳು.

ಆ ಕಾಗದ ಕೊಟ್ಟ ಹುಡುಗ ಅದೇ ಬೀದಿಯಲ್ಲಿ ಟಾಕ್ಸಿ, ರಿಕ್ಷ ಗಳನ್ನು ಕರೆದು ತರುವ ಊಳಗದ ಕೆಲಸಮಾಡಿಕೊಂಡಿರುತ್ತಾನೆ. ಹೊರಗೆ ಹೋಗಿ ಅವನನ್ನು ಹಿಡಿದುಕೊಂಡು ಬಂದೆವು. ಆ ಕಾಗದ ವನ್ನು ಅವನ ಕೈಯಲ್ಲಿ ಕಳುಹಿಸಿದವರಾರೆಂದು ವಿಚಾರಿಸಿದೆವು. ಆ ಹುಡುಗನಿಗೆ ಅವನಾರೆಂಬುದು ಗೊತ್ತಿಲ್ಲ. ಅವನ ಕೈಗೆ ಒಂದಾಣೆ ಕೊಟ್ಟು ಕಾಗದವನ್ನು ಈ ಷಾಪಿನಲ್ಲಿರುವ ಹುಡುಗಿಗೆ ಕೊಡಲು ಹೇಳಿ ಹೊರಟು ಹೋದನಂತೆ. ನಾಳೆ ಹೇಗಿದ್ದರೂ ಬಂದೇ ಬರುತ್ತಾನಲ್ಲ ಎಂದುಕೊಂಡು ಆ ಹುಡುಗನಿಂದ ಅವನ ಸ್ಥೂಲ ರೂಪು ವೇಷಗಳನ್ನು ತಿಳಿದುಕೊಂಡು ಅವನನ್ನು ಕಳುಹಿಸಿಕೊಟ್ಟೆವು. ಬೆಟ್ಸಿಗೆ "ನಾಳೆ ಎರಡು ಗಂಟೆಗೆ ಅವನು ಬರುವೆನೆಂದು ಹೇಳಿದ್ದಾನೆ. ಬಂದಾಗ ಅವನೊಂದಿಗೆ ಮಾತನಾಡುತ್ತಿರು. ಅದನ್ನೂ ಇದನ್ನೂ ಕೊಂಡುಕೊಳ್ಳಲು ಹೇಳು. ನಾವು ಒಳಗೇ ಇರುತ್ತೇವೆ. ನಾವಿರುವ ಸುಳುವನ್ನು ಅವನಿಗೆ ಕೊಡಬೇಡ. ಅವನು ಮೋಹದ ಹುಚ್ಚಿನಲ್ಲಿರುವಾಗ ಅಷ್ಟು ವ್ಯಾಪಾರವಾಗಲಿ. ಅದರ ಬಿಲ್ಲು ಹಾಕುವಾಗ ನನ್ನ ಹೆಸರು ಹಿಡಿದು ಕರಿ. ಆಗ ನಾವು ಅವ ನನ್ನು ನೋಡಿಕೊಳ್ಳುತ್ತೇವೆ" ಎಂದು ಆಚಾರ್ಯ ಅವಳಿಗೆ ಹೇಳಿದ. ಆಚಾರ್ಯನಿಗೆ ವ್ಯಾಪಾರದ ಬುದ್ಧಿ ಎಲ್ಲಿಗೆ ಹೋಗುತ್ತೆ? ಬ್ರಾಹ್ಮಣರು ವ್ಯಾಪಾರದಲ್ಲಿ ಈಗ ವೈಶ್ಯರನ್ನು ಮೀರಿಸಿಬಿಟ್ಟಿದ್ದಾರೆ. ಸರಕಾರದವರು ಬ್ರಾಹ್ಮಣರಿಗೆ ಕೆಲಸಕೊಡದೆ ಇರುವುದರಿಂದ ಬ್ರಾಹ್ಮಣ ಕುಲಕ್ಕೇ ಉಪ ಕಾರಮಾಡಿದರು. ಅವರು ಇತರ ಉದ್ಯಮಗಳಲ್ಲಿ ಬುದ್ಧಿವಂತಿಕೆ ತೋರಿ ಸಲು ಅವಕಾಶಮಾಡಿಕೊಟ್ಟರು. ಬ್ರಾಹ್ಮಣರು ಈ ರೀತಿ ಅಭಿವೃದ್ಧಿ ಹೊಂದಿದರೆ ನಾಳೆ ದೇಶದ ಉನ್ನತಿ ಇನ್ನೂ ಹೆಚ್ಚುತ್ತೆ.

ಮಾರನೆಯದಿನ ನಾನೂ, ಆ ಹುಡುಗಿಯ ಅಣ್ಣನೂ, ಆಚಾರ್ಯನ ಒಳಗಡೆ ಕೊಠಡಿಯಲ್ಲಿ ಕುಳಿತಿದ್ದೆವು. ಎರಡು, ಎರಡೂವರೆ ಗಂಟೆ ಯಾದರೂ ಆತ ಬರಲಿಲ್ಲ. ಬೆಟ್ಸಿಯ ಅಣ್ಣ ಹೊತ್ತಾಯಿತೆಂದು ಹೊರಟುಹೋದ. ಅವನು ಹೋದ ಅರ್ಧಗಂಟೆಗೆ ಆ ಸೊಗಸುಗಾರ ಪುಟ್ಟಸಾಮಿ ದಯಮಾಡಿಸಿದ. ಬೆಟ್ಸಿಯೊಬ್ಬಳೇ ಹೊರಗಡೆಯಿದ್ದಳು. ಅವನು ಬಂದು ಯಾರೂ ಇಲ್ಲದಿರುವುದನ್ನು ನೋಡಿ ಅವಳೊಡನೆ "ನಿನ್ನೆ ನಾನು ಕಳುಹಿಸಿದ ಕಾಗದ ನಿನ್ನ ಕೈಸೇರಿತೇ?" ಎಂದು ಕೇಳಿದ. ಅವಳು "ಊಂ" ಎಂದಳು. "ನೋಡು, ನಿನ್ನನ್ನು ನೋಡಿದಂದಿನಿಂದ ನನಗೆ ಹೇಗೋ ಆಗಿದೆ. ನಾನಿಲ್ಲಿಗೆ ಬರುವ ಮೊದಲು ಮದ್ರಾಸಿನಲ್ಲಿದ್ದೆ. ಅಲ್ಲಿ ನನಗೆ ಅನೇಕ ಹುಡುಗಿಯರು ಸ್ನೇಹಿತರಾಗಿದ್ದರು" ಎಂದು ಹೇಳಲಾರಂಭಿಸಿದ. ಬೆಟ್ಸಿ ಬಹಳ ಬುದ್ಧಿವಂತೆ. ಅವನೊಂದಿಗೆ ಅದೂ ಇದೂ ಮಾತನಾಡುತ್ತಾ ಒಟ್ಟು ಇಪ್ಪತ್ತು ರೂಪಾಯಿ ಸಾಮಾನು ಗಳನ್ನು ತೆಗೆದುಕೊಳ್ಳುವಂತೆ ಮಾಡಿದಳು. ಆಮೇಲೆ "ಮ್ಯಾನೇಜರ್, ಬಿಲ್ ಹಾಕಿ" ಎಂದಳು. ಆಗ ಅವನಿಗೆ ಅರಿವಾಯಿತು, ಒಳಗಡೆ ಇತರ ರಿರುವರೆಂದು. ನಾವು ಅವನನ್ನು ಒಳಕ್ಕೆ ಕರೆದೆವು. ಇನ್ನೂ ಪ್ರಾಯದ ಹುಡುಗ. ಲಕ್ಷಣವಾಗಿದ್ದಾನೆ. ಸುಂದರವಾಗಿ ಉಡುಪನ್ನು ಧರಿಸಿದ್ದಾನೆ. ಸ್ಫುರದ್ರೂಪಿ. ಎದುರಿನಲ್ಲಿದ್ದ ಕುರ್ಚಿಯಲ್ಲಿ ಕುಳಿತುಕೊಳ್ಳುವಂತೆ ಹೇಳಿ ದೆವು. ಶೀವಿಯಿಂದ ಅದರಲ್ಲವನು ಕುಳಿತುಕೊಂಡ. ಬೆಟ್ಸಿಗೆ ಬರೆದಿದ್ದ ಕಾಗದವನ್ನು ಅವನ ಕೈಗೆ ಕೊಟ್ಟೆವು. ಪೆಚ್ಚಾದ. ಕುಳಿತಿದ್ದ ಸ್ಥಳವನ್ನು ಬಿಟ್ಟು ಏಳಲು ಯತ್ನಿಸಿದ. "ಈ ಕಾಗದ ಬರೆದವನು ನೀನೇ ತಾನೆ: ಉತ್ತರಕೊಡು" ಎಂದೆವು. "ಹೌದು" ಎಂದೊಪ್ಪಿಕೊಂಡ. ಪಾಪ ಇನ್ನೂ ಹುಡುಗ, ಮದ್ರಾಸಿನಿಂದ ಬಂದು ಸೆಂಟ್ ಜೋಸಫ್ ಕಾಲೇಜನ್ನು ಸೇರಿಕೊಂಡಿದ್ದನಂತೆ. ಅವನ ತಂದೆಯ ಹೆಸರು ಸುಬ್ರಮಣ್ಯ ಅಯ್ಯರ್. ಅಕೌಂಟ್ಸ್ ಆಫೀಸಿನ ಸೂಪರಿಂಟೆಂಡೆಂಟರಾಗಿದ್ದಾರಂತೆ. ಇನ್ನುಮೇಲೆ ಹೀಗೆ ಮಾಡಬೇಡ. ಚೆನ್ನಾಗಿ ಓದಿ ನಿನ್ನ ಮನೆತನಕ್ಕೆ ಕೀರ್ತಿ ತೆಗೆದು ಕೊಂಡು ಬಾ ಎಂದು ಆ ಹುಡುಗನಿಗೆ ಬುದ್ಧಿಹೇಳಿ ಕಳುಹಿಸಿಕೊಟ್ಟೆವು. ಅಂದಿನಿಂದ ಬೆಟ್ಸಿಗೆ ಮೊದಲಿಗಿಂತಲೂ ನಮ್ಮಲ್ಲಿ ವಿಶ್ವಾಸ ಹೆಚ್ಚಿತು.

ನಾವೂ ಅಕೆಯನ್ನು ನಮ್ಮ ಸಹೋದರಿಯ ಹಾಗೆ ನೋಡಿಕೊಳ್ಳುತ್ತಿದ್ದೆವು. ಅಷ್ಟರಲ್ಲಿ ಕಾಂಗ್ರೆಸ್ ಚಳುವಳಿ ಜಾಸ್ತಿಯಾಯಿತು. ರಾಜಗೋಪಾಲಾ ಚಾರ್ಯರ ಅಂಗಡಿಯನ್ನು ಮುಚ್ಚಿ ಕಾಂಗ್ರೆಸ್ ವಾಲಂಟಿಯರಾಗಿ ಹೊರಟು ಹೋದ. ಆ ಲಾಗಾಯಿತು ಬೆಟ್ಸಿಯನ್ನು ಕಂಡಿರಲಿಲ್ಲ. ಹದಿನೈದು ವರ್ಷಗಳಾಗಿ ಹೋಗಿದ್ದವು. ಬೆಟ್ಸಿಯ ವಿಚಾರವನ್ನು ಕೇಳಿ ತಿಳಿದುಕೊಳ್ಳಬೇಕೆನ್ನಿಸಿತು.

"ಬೆಟ್ಸಿ, ಈಗ ನೀನಿರುವುದೆಲ್ಲಿ?"

"ಇಲ್ಲೇ ಇದ್ದೇನೆ. ಎಷ್ಟೋ ಸಲ ಈ ಪಾರ್ಕಿಗೆ ಬರುತ್ತಿರುತ್ತೇನೆ."

"ನಾನೂ ಬರುತ್ತಿರುತ್ತೇನೆ. ನೀನೊಂದು ದಿನವೂ ನನಗೆ ಭೇಟಿಯಾಗಿಲ್ಲ!"

"ನಿಮ್ಮನ್ನು ನಾನು ಎಷ್ಟೋ ಸಲ ಇಲ್ಲಿ ನೋಡಿದ್ದೇನೆ. ನೀವೂ ನಿಮ್ಮ ಜೊತೆಗೆ ತೆಲ್ಲಗೆ ಉದ್ದಕ್ಕೆ ಇರುವ ಒಬ್ಬರು ಯಾವಾಗಲೂ ಇದೇ ಶಿಲಾಸನದಮೇಲೆ ಕುಳಿತು ಮಾತನಾಡುತ್ತಿರುತ್ತೀರಿ."

ತೆಳ್ಳಗೆ ಉದ್ದಕ್ಕೆ ಇರುವವರು ನಮ್ಮ ನರಸಿಂಹಾಚಾರ್ಯರು.

"ನಮ್ಮ ಗುರುತು ಹಿಡಿದವಳು ಯಾತಕ್ಕೆ ನನ್ನೊಡನೆ ಒಂದು ದಿನವೂ ಮಾತನಾಡಲಿಲ್ಲ?"

"ನಿಮ್ಮ ಸ್ನೇಹಿತರಿರುವಾಗ ನಿಮ್ಮನ್ನೇಕೆ ತೊಂದರೆಪಡಿಸಲಿ ಎಂದು. ಈ ದಿನ ನೀವೊಬ್ಬರೇ ಇದ್ದಿರಿ ಅದರಿಂದ ಬಂದು ಮಾತನಾಡಿಸಿದೆ."

"ಅದಿರಲಿ. ನಿನಗೆ ಮದುವೆಯಾಯಿತೆ? ಈಗ ಏನು ಕೆಲಸ ಮಾಡಿಕೊಂಡಿದ್ದಿ? ನಿಮ್ಮ ತಾಯಿತಂದೆ ಎಲ್ಲಿದ್ದಾರೆ? ನಿಮ್ಮ ಅಣ್ಣ ಏನಾದ?"

"ಈಗ ನನ್ನ ಜೀವನ ನಾನು ಸಾಗಿಸಿಕೊಂಡು ಹೋಗುತ್ತಿದ್ದೇನೆ. ನನ್ನ ಅಣ್ಣ ಸೈನ್ಯಕ್ಕೆ ಸೇರಿ ಆಫ್ರಿಕಾಕ್ಕೆ ಹೋದ. ಅಲ್ಲಿ ಅವನು ಜರ್ಮನರಿಗೆ ಕೈಸೆರೆಯಾದ. ಅವನನ್ನು ಇಟಲಿಗೆ ಕರೆದುಕೊಂಡುಹೋದರು. ನಮ್ಮ ತಂದೆತಾಯಿಗಳು ತೀರಿಕೊಂಡರು."

"ನಿಮ್ಮ ತಂದೆತಾಯಿಗಳು ಅಷ್ಟು ಗಟ್ಟಿಮುಟ್ಟಗೆ ಇದ್ದರಲ್ಲಾ ಅವರಿಗೆ ಏನಾಗಿತ್ತು? ಸತ್ತು ಎಷ್ಟುದಿನವಾಯಿತು?"

" ಅವರು ಸತ್ತಾಗಲೇ ಹತ್ತುವರ್ಷಗಳಾದವು. ಅವರು ಯಾತಕ್ಕೆ ಸತ್ತರು ಎನ್ನುವುದನ್ನು ಹೇಳಲು ಹೋದರೆ ಅದು ಒಂದು ದೊಡ್ಡ ಕತೆಯಾಗುತ್ತೆ. ನನ್ನ ಕತೆಯನ್ನೆಲ್ಲಾ ಹೇಳಬೇಕಾಗುತ್ತೆ. ನಿಮಗೂ ಬೇಜಾರು ಹಿಡಿಯುತ್ತೆ."

" ನನಗೇನೂ ಬೇಜಾರಾಗುವುದಿಲ್ಲ. ನಾನು ನನ್ನ ಸ್ನೇಹಿತನಿಗೋಸ್ಕರ ಕಾದಿದ್ದೇನೆ. ಅವರು ಎಲ್ಲೋ ಬರುವಹಾಗೆ ಕಾಣಲಿಲ್ಲ. ನಿನ್ನ ನೋಡಿದ್ದಂತೂ ನನಗೆ ಬಹಳ ಸಂತೋಷವಾಗಿದೆ. ನಿನ್ನ ಕತೆ ಕೇಳುವುದಕ್ಕೆ ನನಗೆ ಇಷ್ಟ ಇಲ್ಲವೇ ! ಹೇಳು."

" ನನ್ನ ಕತೆ ಅಷ್ಟು ಸಂತೋಷದ ಕತೆಯಲ್ಲ. ನಮ್ಮ ಆಚಾರ್ಯರ ಅಂಗಡಿ ಬಿಟ್ಟಮೇಲೆ ಪುನಃ ಕೆಲಸಕ್ಕೆ ಸೇರಲಿಲ್ಲ. ಅಲ್ಲದೆ ನಮ್ಮ ತಾಯಿ ತಂದೆಗಳು ಆ ಹುಡುಗ ಬರೆದಿದ್ದ ಕಾಗದದ ವಿಷಯವನ್ನು ಕೇಳಿದಮೇಲೆ ನನ್ನನ್ನು ಮನೆಬಿಟ್ಟು ಹೊರಕ್ಕೆ ಕಳುಹಿಸಿಕೊಡುತ್ತಿರಲಿಲ್ಲ. ನಮ್ಮ ತಂದೆ ತಾಯಿಯರಿಗೆ ಹಿಂದೂಗಳನ್ನಾಗಲೀ ಆಂಗ್ಲೋ ಇಂಡಿಯನ್ನರನ್ನಾಗಲೀ ದೇಶೀ ಕ್ರಿಶ್ಚಿಯನ್ನರನ್ನಾಗಲಿ ಕಂಡರೆ ಅಂತರಂಗದಲ್ಲಿ ಆಗುತ್ತಿರಲಿಲ್ಲ. ಆದರೆ ಅದನ್ನು ಹೊರಗಡೆ ವ್ಯಕ್ತಪಡಿಸುತ್ತಿರಲಿಲ್ಲ. ಅವರಿಬ್ಬರೂ ನೇರಾಗಿ ಸೀಮೆಯಿಂದ ಬಂದವರು. ರಿಟೈಯರ್ಡ್ ಆದಮೇಲೆ ನೇರಾಗಿ ಸೀಮೆಗೇ ಹೋಗಿ ಅಲ್ಲೇ ನೆಲಸಬೇಕೆಂದಿದ್ದವರು. ಅದರಲ್ಲಿಯೂ ನನ್ನ ತಾಯಿ ಇಂಗ್ಲಿಷ್ ಶ್ರೀಮಂತರ ಮನೆತನದವಳಂತೆ. ನನಗೆ ಆಂಗ್ಲಶ್ರೀಮಂತರಂತೆ ವರ್ತಿಸಲು ರೀತಿನೀತಿಗಳ ವಿಷಯದಲ್ಲಿ ನಿತ್ಯವೂ ಬೋಧನೆ ಮಾಡಿದ್ದೂ ಮಾಡಿದ್ದೇ. ನನಗೇನೋ ಅವಳ ನಡೆ ನುಡಿಯೆಲ್ಲವೂ ಒಣಜಂಭದ ಹಾಗೇ ಕಾಣುತ್ತಿತ್ತು. ಅದು ನನಗೆ ಸರಿಬೀಳುತ್ತಿರಲಿಲ್ಲ. ಅಲ್ಲದೆ ನಾವು ಹಿಂದೂದೇಶದಲ್ಲೇ ಹುಟ್ಟಿ ಬೆಳೆಯುತ್ತಿದ್ದೇವೆ. ಹಿಂದೂದೇಶದ ಅನ್ನ ತಿನ್ನುತ್ತಿದ್ದೇವೆ. ನಾವು ಹಿಂದೂಗಳನ್ನಾಗಲೀ ಇತರ ದೇಶೀಯರನ್ನಾಗಲಿ ಕಂಡಾಗ ಹಾಗೆ ಆಡುವುದು ಇಂಗ್ಲೀಷಿನವರಂತೇ ವರ್ತಿಸುವುದು ತಪ್ಪು ಅನ್ನಿಸುತಿತ್ತು. ಆದರೆ ವಿಧಿಯಿಲ್ಲ. ನಮ್ಮ ತಾಯಿಯ ಹಾಗೆ ನಾನೂ ಕುಣಿಯಬೇಕಾಗಿತ್ತು. ಎಷ್ಟೋಸಲ ನಮ್ಮ ರೈಲ್ವೆ ಕಾಲೋನಿ ಹುಡುಗಿಯರ ಪಾರ್ಟಿಗೆ ಹೋಗಬೇಕೆಂದೆನಿಸುತಿತ್ತು. ನಮ್ಮ ತಾಯಿ

ನನಗೆ ಅವಕಾಶಕೊಡಳು. ನನ್ನ ಅಣ್ಣನ ಸ್ನೇಹಿತ ಆಗಾಗ ಮನೆಯ ಬಳಿಗೆ ಬರುತ್ತಿದ್ದ. ಅವನು ಆಂಗ್ಲೋ ಇಂಡಿಯನ್ ಆಗಿದ್ದರಿಂದ ಮನೆಯ ಒಳಕ್ಕೆ ಅವನನ್ನು ಸಂಪೂರ್ಣ ವಿಶ್ವಾಸದಿಂದ ನಮ್ಮ ತಂದೆಯಾಗಲಿ ತಾಯಿಯಾಗಲಿ ಬರಮಾಡಿಕೊಳ್ಳುತ್ತಿರಲಿಲ್ಲ. ಅವನು ನನ್ನನ್ನು ಮಾತ ನಾಡಿಸುತ್ತಿದ್ದ. ಅವನೊಡನೆ ಹರಟೆಹೊಡೆಯುತ್ತಾ ಕೂಡಲು ನನಗೆ ಆಸೆಯಾಗುತ್ತಿತ್ತು. ಆದರೆ ನನ್ನ ತಾಯಿ ಎಡಬಿಡದೆ ನನ್ನಮೇಲೆ ಕಾದಿರುತ್ತಿದ್ದಳು."

"ಹೀಗಿದ್ದಲ್ಲಿ ನಿನ್ನನ್ನು ಆಚಾರ್ಯನ ಅಂಗಡಿಯಲ್ಲಿ ಕೆಲಸ ಮಾಡಲು ಹೇಗೆ ಒಪ್ಪಿ ಕಳುಹಿಸಿಕೊಟ್ಟಿದ್ದರು?"

"ಅದು ಮೀರಬಾರದಕ್ಕೆ ಕಳುಹಿಸಿದ್ದರು. ಆಚಾರ್ಯರ ವಿಷಯ ದಲ್ಲಿ ಅವರಿಗೆ ಬಹಳ ಗೌರವವಿತ್ತು. ಆಚಾರ್ಯರ ತಂದೆ ನಮ್ಮ ತಂದೆಗೆ ಬಹಳ ಸಹಾಯಮಾಡಿದ್ದರು. ಆದರಿಂದ ಹಿಂದೆ ನಮ್ಮ ತಂದೆ ಸಾಲದ ತೊಡಕಿಗೆ ಸಿಕ್ಕಿಕೊಂಡಾಗ ಆಚಾರ್ಯರ ತಂದೆಯ ಬಳಿಗೆ ಹೋಗಿ ದ್ದರು. ಅಗ ಅವರು ನನ್ನನ್ನೂ ನನ್ನ ಅಣ್ಣನನ್ನೂ ಕೆಲಸಕ್ಕೆ ಸೇರಿಸಿ ನಾಲ್ಕು ಕಾಸು ನಮ್ಮ ತಂದೆಗೆ ಬರುವಂತೆ ಮಾಡಿಕೊಟ್ಟರು. ಆ ಕಾಗದದ ಗಲಾಟೆಯಾದಮೇಲೆ ಆಚಾರ್ಯರ ಮಾತು ಮೀರಲಾರದೆ ನನ್ನನ್ನು ಕೆಲಸಕ್ಕೆ ಕಳುಹಿಸಿಕೊಡುತ್ತಿದ್ದರು. ಆಚಾರ್ಯರು ಅಂಗಡಿ ಮುಚ್ಚಿದ ಮೇಲೆ ನನ್ನನ್ನು ಮನೆಯಲ್ಲಿಯೇ ನಿಲ್ಲಿಸಿಕೊಂಡುಬಿಟ್ಟರು. ಯಾರಲ್ಲೂ ನನ್ನನ್ನು ಸೇರಿಸಲಿಲ್ಲ."

"ಪುನಃ ನೀನು ಕಾನ್ವೆಂಟಿಗೂ ಓದಲು ಹೋಗಲಿಲ್ಲವೇ?"

"ಪುನಃ ಓದುವುದಕ್ಕೂ ಹೋಗಲಿಲ್ಲ. ಮನೆಯಲ್ಲಿಯೇ ನಿಂತು ಬಿಟ್ಟೆ. ಆ ವರ್ಷದ ಕ್ರಿಸ್‌ಮಸ್ ದಿನ ನಮ್ಮ ತಂದೆ ಮನೆಗೆ ಬರುವಾಗ ಒಬ್ಬ ಆಂಗ್ಲ ಯುವಕನನ್ನು ಜೊತೆಗೆ ಕರೆದುಕೊಂಡು ಬಂದ. ಆತ ಬಹಳ ಸುಂದರನಾಗಿದ್ದ. ಆತನ ನಡೆನುಡಿಗಳಲ್ಲಿ ಶ್ರೀಮಂತರ ಗಾಂಭೀರ್ಯ ಎದ್ದು ಕಾಣುತ್ತಿತ್ತು. ಆತ ನನಗೆ ಹಬ್ಬದ ಉಡುಗೊರೆಯನ್ನೂ ತಂದಿದ್ದ. ನಮ್ಮ ತಂದೆ ಆತನನ್ನು ನಮ್ಮ ತಾಯಿಗೆ, ಅಣ್ಣನಿಗೆ, ನನಗೆ ಪರಿಚಯ ಮಾಡಿಕೊಟ್ಟರು. ಆದಿನ ರಾತ್ರಿ ಪಾನೀಯಗಳನ್ನು ಯತೇಷ್ಟವಾಗಿ ಉಪ

ಯೋಗಿಸಿದರು. ನನಗೆ ಪಾನೀಯಗಳಲ್ಲಿ ಅಭಿರುಚಿಯಿರಲಿಲ್ಲ. ಆತನ ಬಲವಂತಕ್ಕೆ ನಾನು ಒಂದು ಬಟ್ಟಲಿನಲ್ಲಿ ಕೊಂಚ ತೆಗೆದುಕೊಂಡೆ. ಆ ದಿನ ರಾತ್ರಿಯೆಲ್ಲಾ ಆತ ನನ್ನೊಡನೆ ಮಾತನಾಡುತ್ತಲೇ ಇದ್ದ. ನಮ್ಮ ತಾಯಿ ನನಗೆ ಏಕಾಂತವಾಗಿ ಉಸರಿದಳು—ಆತ ರೈಲ್ವೆ ಕಂಪನಿಯ ಡೈರೆಕ್ಟರುಗಳಲ್ಲಿ ಒಬ್ಬನ ಕುವರನೆಂದೂ, ಅವರು ಬಹಳ ಶ್ರೀಮಂತರೆಂದೂ ಇಂಗ್ಲಂಡಿನಲ್ಲಿ ಅವರಿಗೆ ಎಸ್ಟೇಟೂ, ಕಾಸೆಲ್ಲೂ ಇರುವುದೆಂದೂ, ಅವನು ನನ್ನನ್ನು ಮೆಚ್ಚಿ ಮದುವೆಯಾದಲ್ಲಿ ನಾನು ಅದೃಷ್ಟಶಾಲಿಯೆಂದೂ ಹೇಳಿದಳು. ಅಂದಿನಿಂದ ಆತ ಪ್ರತಿ ಸಂಜೆಯೂ ನಮ್ಮ ಮನೆಗೆ ಬರುವುದಕ್ಕೆ ಆರಂಭವಾಯಿತು. ಪ್ರತಿದಿನವೂ ಏನಾದರೂ ಒಂದು ಹೆಚ್ಚಿಗೆ ಆತನೊಂದಿಗೆ ಬರುತ್ತಿತ್ತು. ಮೊದಲು ಮೊದಲು ನನ್ನನ್ನೂ ನನ್ನ ತಾಯಿಯನ್ನೂ ಸಿನೀಮಾಮಂದಿರಗಳಿಗೂ ಫನಲ್ಸ್ ಮೊದಲಾದ ಪಾನೀಯ ಗೃಹಗಳಿಗೂ ಕರೆದುಕೊಂಡು ಹೋಗುವುದಾಯಿತು. ಆಮೇಲೆ ನನ್ನ ತಾಯಿ ನನ್ನೊಬ್ಬಳನ್ನೇ ಅವನೊಡನೆ ಕಳುಹಿಸಿಕೊಡಲು ಯತ್ನಿಸಿದಳು. ನಮ್ಮ ಅಣ್ಣನಿಗೇಕೋ ಆತನನ್ನು ಕಂಡರೆ ಆಗುತ್ತಿರಲಿಲ್ಲ. ನಮಗೆ ಆಗಾಗ ಎಚ್ಚರಿಕೆ ಕೊಡುತ್ತಿದ್ದ. ನಾನಂತೂ ಆತನಲ್ಲಿ ಅನುರಕ್ತಳಾಗಿ ಹೋಗಿದ್ದೆ. ಈಗಲೂ ನಾನಾತನನ್ನು ಮರೆಯೆ."

ಬೆಟ್ಸಿ ಹೇಳುತ್ತಿದ್ದುದನ್ನು ನಿಲ್ಲಿಸಿ ತನ್ನ ಕೈಚೀಲವನ್ನು ತೆರೆದು ಅದರಲ್ಲಿದ್ದ ಕರವಸ್ತ್ರವನ್ನು ಹೊರಕ್ಕೆ ತೆಗೆದುಕೊಂಡು ಮೂಗನ್ನು ಒತ್ತಿಕೊಂಡಳು. ಕಣ್ಣುಗಳಲ್ಲಿಯೂ ನೀರೂರಿರಬಹುದು.

"ಆತ ಏನಾದ?" ಎಂದು ಕೇಳಿದೆ.

"ಅವರು ಆರು ತಿಂಗಳು ಇಲ್ಲಿದ್ದರು. ಆಮೇಲೆ ಇದ್ದಕ್ಕಿದ್ದ ಹಾಗೆ ಎರಡು ಮೂರು ದಿನಗಳಾದರೂ ಮನೆಯಕಡೆ ಬರಲಿಲ್ಲ. ನಮ್ಮ ತಂದೆಯವರೂ ಊರಿನಲ್ಲಿರಲಿಲ್ಲ. ನಮ್ಮ ಅಣ್ಣನಿಗೆ ಅವರ ವಿಷಯ ಹೇಳಿದರೆ ಎಲ್ಲಿ ಗದರಿಸಿಬಿಡುವನೋ ಎಂದುಹೇಳಲಿಲ್ಲ. ನಮ್ಮ ತಾಯಿ "ಅವರೇತಕ್ಕೆ ಎರಡುಮೂರು ದಿನಗಳಿಂದ ಈಕಡೆಗೆ ಬರಲಿಲ್ಲ? ಅವರಿಗೆ ಅಸಮಾಧಾನವಾಗುವಹಾಗೆ ನೀನೇನಾದರೂ ವರ್ತಿಸಿದೆಯಾ?" ಎಂದು ನನ್ನನ್ನೇ ಆಕ್ಷೇಪಿಸತೊಡಗಿದಳು. ಅವರಿಲ್ಲದಿದ್ದದ್ದು ನನಗೆ ಪ್ರಪಂಚವೇ ಬೇಡ

ವಾಗಿತ್ತು. ನನ್ನ ಸರ್ವಸ್ವವನ್ನೂ ಅವರಲ್ಲಿ ಅರ್ಪಿಸಿಬಿಟ್ಟಿದ್ದೆ."

ಬೆಟ್ಸಿ ಮಾತನಾಡದೇ ಸುಮ್ಮನೆ ಕುಳಿತಳು.

"ಆಮೇಲೆ?" ಎಂದು ಕೇಳಿದೆ. ಮಾತನಾಡಲಿಲ್ಲ. ಕೆಲವು ನಿಮಿಷಗಳಾದಮೇಲೆ ಮತ್ತೆ ಪ್ರಶ್ನಿಸಿದೆ. ಅವಳು ತನ್ನ ಕೈಚೀಲದಿಂದ ಸಿಗರೇಟಿನ ಕೇಸನ್ನೂ ಬೆಂಕಿಪೆಟ್ಟಿಗೆಯನ್ನೂ ಹೊರಕ್ಕೆ ತೆಗೆದಳು. "ನಿಮಗದರಿಂದ ತೊಂದರೆಯಿಲ್ಲತಾನೆ" ಎಂದುಹೇಳಿ ಸಿಗರೇಟೊಂದನ್ನು ಹಚ್ಚಿಸಿಕೊಂಡಳು.

"ಆಮೇಲೆ?" ಎಂದು ಮತ್ತೆ ಪ್ರಶ್ನಿಸಿದೆ. ಹೇಳತೊಡಗಿದಳು.

"ಆಮೇಲೆ ಏಡನ್ನಿನಿಂದ ಅವರ ಪತ್ರ ಬಂತು. ತಕ್ಷಣ ಸ್ವದೇಶಕ್ಕೆ ಹೊರಟುಬಿಡಬೇಕಾಗಿದ್ದುದರಿಂದ ನನಗೆ ಹೇಳದೆ ಹೊರಟುಬಿಟ್ಟರೆಂದೂ ಹಿಂದೂದೇಶಕ್ಕೆ ಮರಳಿ ಬರುವೆನೆಂದೂ, ಅವರನ್ನು ಮರೆಯಬೇಡವೆಂದೂ ಬರೆದಿದ್ದರು. ಆ ಪತ್ರವನ್ನು ಓದಿದಮೇಲೆ ನನಗೆ ಅನ್ನಾಹಾರಗಳೊಂದೂ ಬೇಕಾಗಲಿಲ್ಲ. ನನ್ನ ತಾಯಿ ಆತನಿಂದ ಕಾಗದ ಬಂತೇ ಏನೆಂದು ಬರೆದಿದ್ದಾರೆ? ಎಂದು ಕೇಳಿದಳು. ಕಾಗದ ಅವಳ ಕೈಗೆ ಕೊಟ್ಟೆ. ಕಾಗದ ವನ್ನು ಓದಿ ನೋಡಿಕೊಂಡಳು. ಅಷ್ಟರಲ್ಲಿ ನಮ್ಮ ಅಣ್ಣ ಬಂದ. ಅವನಿಗೂ ವಿಷಯ ಗೊತ್ತಾಯಿತು. "ನಾನು ಮೊದಲೇ ಹೇಳಲಿಲ್ಲವೇ, ಅನುಭವಿಸಿ ಈಗ" ಎಂದುಹೇಳಿ ಅಲ್ಲಿಂದ ಅವನು ಹೊರಟುಬಿಟ್ಟ. ನನ್ನ ದುಗುಡವನ್ನು ಇನ್ನು ಯಾರಲ್ಲಿ ಹೇಳಿಕೊಳ್ಳಲಿ. ನನಗೆ ಒಬ್ಬ ಸ್ನೇಹಿತರೂ ಇಲ್ಲದ ಹಾಗೆ ನಮ್ಮ ತಾಯಿ ಮಾಡಿಬಿಟ್ಟಿದ್ದಾಳೆ. ನನ್ನಪಾಲಿಗೆ ಇದ್ದವನು ನನ್ನ ಅಣ್ಣ ನೊಬ್ಬ. ಆತ ಹೀಗೆ ಹೇಳಿ ಹೊರಟುಹೋದ. ಅವರಿಗೆ ಕಾಗದ ಬರೆಯೋಣವೆಂದರೆ ಅವರ ಅಡ್ರಸ್ಸನ್ನು ನಮೂದಿಸಿಲ್ಲ. ರಾತ್ರಿ ಅಣ್ಣ ಹಿಂತಿರುಗಿ ಬಂದಾಗ ನಡೆದಿದ್ದ ಸುದ್ದಿ ತಂದಿದ್ದ. ಅದನ್ನು ಕೇಳಿದೊಡನೆ ನನಗೆ ಸಿಡಿಲೆರೆದಂತಾಯಿತು. ಆತ ಸೀಮೆಗೆ ಹಿಂತಿರುಗಿದ್ದು ಅಲ್ಲವರಿಗೆ ಮದುವೆ ನಿಷ್ಕರ್ಷೆಯಾದದ್ದಕ್ಕೆಂತಲೂ ಪುನಃ ಅವರು ಹಿಂತಿರುಗುವ ಸಂಭವವಿಲ್ಲವೆಂತಲೂ ತಿಳಿಸಿದ.

"ನಮ್ಮ ತಂದೆ ಊರಿನಿಂದ ಹಿಂತಿರುಗಿ ಬಂದಮೇಲೆ ನಡೆದಿದ್ದ ವಿಷಯವನ್ನು ಕೇಳಿ ತಿಳಿದುಕೊಂಡರು. ಅಪ್ರತಿಭರಾದರು. ಕೈಗೆ

ಸಿಕ್ಕಿದ ಹಕ್ಕಿಯನ್ನು ಭದ್ರವಾಗಿ ಇಟ್ಟುಕೊಳ್ಳದೇ ಬಿಟ್ಟುಬಿಟ್ಟೆನೆಂದು ನಮ್ಮ ತಾಯಿ ನನ್ನನ್ನು ಅಂದಳು. ನನ್ನ ದುಃಖ ಆ ಪರಮೇಶ್ವರನಿಗೆ ಗೊತ್ತು. ಅಲ್ಲದೆ ಗರ್ಭದ ಚಿಹ್ನೆ ನನಗೆ ತೋರುತ್ತಿತ್ತು. ಇನ್ನು ಈ ವಿಷಯ ಇವರಿಗೆ ಗೊತ್ತಾಗಿಬಿಟ್ಟರೆ ನನ್ನ ಗತಿಯೇನು? ಎಷ್ಟುದಿನ ಮುಚ್ಚಿಟ್ಟುಕೊಂಡಿರಲು ಆಗುವುದು? ಎಲ್ಲಾದರೂ ಹೋಗಿ ಪ್ರಾಣವನ್ನು ಕಳೆದುಕೊಳ್ಳಬೇಕೆಂದು ಮಾಡಿಕೊಂಡೆ."

ಬೆಟ್ಸಿ ಪುನಃ ಇನ್ನೊಂದು ಸಿಗರೇಟನ್ನು ಹಚ್ಚಿಸಿಕೊಂಡು ಹೇಳ ತೊಡಗಿದಳು.

"ನಮ್ಮ ಕಾಲೋನಿಯ ಅರ್ಧಮೈಲಿ ದೂರದಲ್ಲಿ ಒಂದು ಹಿಂದೂ ದೇವಸ್ಥಾನವಿದೆ. ಅಲ್ಲಿಗೆ ಹೋಗಬೇಕಾದರೆ ಕಾಲುದಾರಿಯಲ್ಲೇ ಹೋಗಬೇಕು. ಕಾಲುದಾರಿ ಕೊಳದಬಳಿ ಹಾದು ಹೋಗುತ್ತದೆ. ಅವರೊಂದಿಗೆ ನಾನು ಕೊಳದ ಸೋಪಾನದಲ್ಲಿ ಕುಳಿತು ಎಷ್ಟೋ ಸಂಜೆ, ಇರುಳುಗಳನ್ನು ಕಳೆದಿದ್ದೇನೆ. ಒಂದು ದಿನ ನಾನೊಬ್ಬಳೇ ಏಕಾಂಗಿಯಾಗಲ್ಲಿ ಕುಳಿತಿದ್ದೆ. ಮುಂದೇನುಮಾಡಬೇಕು ಎನ್ನುವುದು ತೋರದಾಗಿತ್ತು. ಪ್ರಾಣವನ್ನು ಕಳೆದುಕೊಳ್ಳಲು ಮನಸ್ಸು ಹಿಂತೆಗೆದಿತ್ತು. ನನ್ನ ಪ್ರಾಣದೊಂದಿಗೆ ಇನ್ನೊಂದರ ಪ್ರಾಣ ತೆಗೆಯಬೇಕಾಗುವುದು. ಅದರ ಪ್ರಾಣ ತೆಗೆಯಲು ನನಗೆ ಏನು ಅಧಿಕಾರ! ಅದು ಪಾಪವಿದೆ. ಘೋರ ಪಾಪ! ಇನ್ನೊಂದು ಪ್ರಾಣದ ಸುಳಿವನ್ನು ಯಾರಿಗೂ ತಿಳಿಯದ ಹಾಗೆ, ನನ್ನ ತಾಯಿಗೂ ತಿಳಿಯದ ಹಾಗೆ ಎಚ್ಚರಿಕೆಯಿಂದಿದ್ದೆ. ಎಷ್ಟು ದಿನ ಮುಚ್ಚಿಡಲಾಗುವುದು? ಅಧೀರಳಾದೆ. ಆ ಹೊತ್ತಿನಲ್ಲಿ ನನ್ನ ಕಷ್ಟ ಸುಖಗಳನ್ನು ವಿಚಾರಿಸಿ ನನಗೆ ಧೈರ್ಯಕೊಡುವ, ಬುದ್ಧಿ ಹೇಳುವ ಆಪ್ತರಾದ ಒಂದು ಪ್ರಾಣಿಯಾದರೂ ಇರಬೇಕಾಗಿತ್ತು. ಆಗ ನಾನು ಏಕಾಂಗಿಯಾಗಿಬಿಟ್ಟಿದ್ದೆ. ದೇವರೊಬ್ಬನಿದ್ದಾನೆ. ಕುರಿಮರಿಯನ್ನು ಆ ರಕ್ಷಕ ಸಲುಹುತ್ತಾನೆ ಎಂಬುದನ್ನು ಮರೆತುಬಿಟ್ಟಿದ್ದೆ.

"ಹಿಂದೂ ದೇಗುಲಕ್ಕೆ ಅದೇ ದಾರಿ ಎಂದು ಹೇಳಿದೆ. ಪ್ರತಿ ಶನಿವಾರದಲ್ಲೂ ಸಂಜೆ ನಮ್ಮ ಕಾಲೋನಿ ಡಾಕ್ಟರ ಪತ್ನಿ ದೇಗುಲಕ್ಕೆ ಹೋಗಿಬರುತ್ತಿದ್ದರು. ಅವರೊಂದಿಗೆ ಅವರ ಎಳೆಯ ಕುವರಿಯನ್ನೊ

ಅವರ ಆಳು ಹಿಂದುಗಡೆ ಕರತರುತ್ತಿದ್ದ. ಆ ದಿನವೂ ಅವರು ದೇಗುಲಕ್ಕೆ ಹೋಗುವಾಗ ನಾನು ಅಲ್ಲೇ ಏಕಾಂಗಿಯಾಗಿ ಕುಳಿತಿರುವುದನ್ನು ನೋಡಿಕೊಂಡು ಹೋಗಿದ್ದರಂತೆ. ಹಿಂತಿರುಗಿ ಬರುವಾಗಲೂ ನನ್ನನ್ನಲ್ಲಿ ನೋಡಿದರು. ಹಿಂದೆ ನಾನೂ ಆತನೂ ಅಲ್ಲಿ ಕುಳಿತು ಸಲ್ಲಾಪಗೈಯುತ್ತಿದ್ದದ್ದನ್ನು ಎಷ್ಟೋ ಸಲ ಕಂಡಿದ್ದರಂತೆ. ಆ ಮೇಲೆ ನಾವೇನಾದೆವು ಎಂದುಕೂಡ ಕೆಲವುಸಲ ಯೋಚಿಸಿದ್ದರಂತೆ. ಅನಂತರ ಆತ ಇಂಗ್ಲೆಂಡಿಗೆ ತೆರಳಿದ್ದ ವಿಷಯ ಡಾಕ್ಟರಿಂದ ಅವರಿಗೆ ತಿಳಿದ್ದಿದ್ದಿತಂತೆ. ಹಿಂತಿರುಗಿದಾಗಲೂ ನಾನು ಅಲ್ಲೇ ಕುಳಿತಿರುವುದನ್ನು ಕಂಡು ಎಲ್ಲಿ ಏನು ಆತ್ಮಹತ್ಯ ಮಾಡಿಕೊಂಡುಬಿಡುವಳೋ ಎಂಬ ಭೀತಿ ಅವರಿಗೆ ಆಗ ತೋರಿತಂತೆ. ಆಳನ್ನೂ ಮಗಳನ್ನೂ ಮನೆಗೆ ಕಳುಹಿಸಿಕೊಟ್ಟು ನಾನಿದ್ದೆಡೆಗೆ ಬಂದು ಕುಳಿತುಕೊಂಡರು. "ಯಾಕೆ ಮಗು ಹೀಗಿದ್ದಿ?" ಎಂದು ಕೇಳಿದರು. ಅಲ್ಲಿಯವರಿಗೂ ತಡೆದಿದ್ದ ನನ್ನ ದುಗುಡದ ಕಟ್ಟೆ ಒಡೆದುಹೋಯಿತು. ಅಳುವು ಬಿಕ್ಕಿ ಬಿಕ್ಕಿ ಬಂದಿತು. ಅವರ ತೊಡೆಯಲ್ಲಿ ಮೊಗವನ್ನಿಟ್ಟು ಅಳಲಾರಂಭಿಸಿದೆ. ಅವರು ನನ್ನನ್ನು ಸಮಾಧಾನಪಡಿಸಲು ಹತ್ತಿರಕ್ಕೆ ಕರೆದುಕೊಂಡು ಮೈಮೇಲೆ ಕೈ ಆಡಿಸುತ್ತಿದ್ದಾಗ ನಾನು ಗರ್ಭಿಣಿಯೆಂಬುದು ಅವರಿಗೆ ಗೊತ್ತಾಯಿತು. ಒಡನೆ ಪರೀಕ್ಷೆಮಾಡಿ ಎಷ್ಟು ತಿಂಗಳು ಎಂಬುದನ್ನು ತಿಳಿದುಕೊಂಡರು. ಎಷ್ಟಾದರೂ ಡಾಕ್ಟರ ಹೆಂಡತಿ. ಅಲ್ಲದೆ ಅವರೂ ಅವರ ಅಕ್ಕನೊಡನೆ ಡಾಕ್ಟರಪರೀಕ್ಷೆಗೆ ಓದುತ್ತಿದ್ದರಂತೆ. ಆದರೆ ಮಧ್ಯದಲ್ಲಿಯೇ ಓದನ್ನು ಬಿಡಬೇಕಾಗಿದ್ದಿತಂತೆ. ಅವರಕ್ಕ ಡಾಕ್ಟರಾಗಿ ಮದ್ರಾಸಿನಲ್ಲಿ ನಿಂತರಂತೆ. ಆದರೂ ಅವರಿಗೆ ಅನುಭವ ಚೆನ್ನಾಗಿತ್ತು. ಆ ಹೊತ್ತಿನಲ್ಲಿ ನನ್ನೊಡನೆ ಅವರು ನನ್ನ ತಾಯಿಗಿಂತ ಹೆಚ್ಚಾಗಿ ವಿಶ್ವಾಸ ತೋರಿಸಿ ಮಾತನಾಡಿದರು. ನನ್ನ ವಿಷಯಗಳನ್ನೆಲ್ಲಾ ಕೇಳಿ ತಿಳಿದುಕೊಂಡರು. ನಮ್ಮ ಮತದಲ್ಲಿ ಕನ್ಫೆರ್ಷನಿಗೆ ನಾವು ಹೆಚ್ಚುಪ್ರಾಶಸ್ತ್ಯ ಕೊಟ್ಟಿದ್ದೇವೆ. ಅದರಿಂದ ಆತ್ಮ ಶುಚಿಹೊಂದಲು ಅವಕಾಶವಾಗುತ್ತೆ. ಅವರು ನನ್ನೊಡನೆ ಇದ್ದಾಗ ನನಗೆ "ದೇವರು ಇದ್ದಾನೆ. ತನ್ನ ಮಕ್ಕಳನ್ನು ತಾನೆಂದಿಗೂ ಕೈ ಬಿಡುವುದಿಲ್ಲ" ಎಂಬ ಅರಿವಾಯಿತು. ಆಕೆಗೆ ನಮ್ಮ ತಾಯಿತಂದೆಗಳ ಸ್ವಭಾವ ಗೊತ್ತಿತ್ತು. ನನ್ನ ವಿಶಿಷ್ಟಭಾರವನ್ನೂ ತಾವೇ

ಹೊರುವರೆಂದು ಭರವಸೆಕೊಟ್ಟು, ನಾನೂ ಆಕೆಯ ಆ ಎಳೆಯ ಕುವರಿಯ ಹಾಗೆ ಒಬ್ಬ ಮಗಳು ಎಂದು ಹೇಳಿ ನನ್ನನ್ನು ಮನೆಯವರಿಗೂ ಕರೆತಂದು ಮನೆಗೆ ಕಳುಹಿಸಿಕೊಟ್ಟು ಹೋದರು. ಆ ಹೊತ್ತಿನಿಂದ ನನಗೆ ಮನೆಯವರೆಲ್ಲರೂ ಬೇರೆಯವರ ಹಾಗೆ ಕಂಡರು. ಆಕೆಯಲ್ಲಿ ಆತ್ಮೀಯತೆ ಬೆಳೆದುಹೋಯಿತು.

"ಆಕೆ ಸಮಯ ಸಂದರ್ಭ ನೋಡಿಕೊಂಡು ನಮ್ಮ ತಾಯಿತಂದೆಗಳಿಗೆ ಇರುವ ವಿಷಯತಿಳಿಸಿ ಕಾಲೋನಿಯ ಇತರರಿಗೆ ನಾನು ಮದ್ರಾಸಿಗೆ ಓದಲು ಹೋದೆ ಎಂಬುದಾಗಿ ಹೇಳಲು ಹೇಳಿ ಆಕೆಯ ಅಕ್ಕ ಮದ್ರಾಸಿನಲ್ಲಿ ಡಾಕ್ಟರು ಎಂದು ಹೇಳಿದೆನಲ್ಲಾ—ಅವರಲ್ಲಿಗೆ ನನ್ನನ್ನು ಕಳುಹಿಸಿಕೊಟ್ಟರು.

"ನಾನು ಮದ್ರಾಸಿಗೆ ಹೋದಮೇಲೆ ನಮ್ಮ ತಾಯಿ ತಂದೆಗಳಿಗೆ ಹುಚ್ಚು ಹಿಡಿದಂತಾಯಿತಂತೆ. ನನ್ನನ್ನಗಲಿರುವುದಕ್ಕೋಸ್ಕರ ಅಲ್ಲ. ಅವಮಾನದ ಇರಿತ ಅವರನ್ನು ಬಾಧಿಸತೊಡಗಿತು. ಅಲ್ಲದೆ, ಹಾಗೆ ಆಗಲು ಅವರೇ ಕಾರಣ ಎಂಬುದು ಅವರನ್ನು ಕಿತ್ತು ತಿನ್ನುತ್ತಿತ್ತು.

"ನನಗೆ ಪುತ್ರೋತ್ಸವವಾದಾಗ ಅವರಿಗೆ ಸಂತೋಷವಿಲ್ಲ. ಆ ಸಂತೋಷದಲ್ಲಿ ನನ್ನೊಂದಿಗೆ ಭಾಗಿಯಾದವರು ಮದ್ರಾಸಿನಲ್ಲಿ ನನ್ನನ್ನು ಸಲುಹುತ್ತಿದ್ದ ಡಾಕ್ಟರು, ಬೆಂಗಳೂರಿನಲ್ಲಿದ್ದ ಆಕೆಯ ತಂಗಿ, ಡಾಕ್ಟರ ಪತ್ನಿ. ಆ ವಿಷಯವನ್ನು ಡಾಕ್ಟರ ಪತ್ನಿ ಕೇಳಿದೊಡನೆಯೇ ಮಗುವಿಗೆ ಉಡುಗೊರೆ ಕಳುಹಿಸಿಕೊಟ್ಟರು. ನಮ್ಮ ತಂದೆತಾಯಿಯಿಂದ ಒಂದು ಪತ್ರವೂ ಇಲ್ಲ. ನನ್ನ ಅಣ್ಣ ಮಟ್ಟಿಗೆ ಬಂದು ನೋಡಿಕೊಂಡು ಹೋದ. ನನ್ನ ತಂದೆ ವಾರಕ್ಕೆ ಮೂರುದಿನ ಮದ್ರಾಸಿಗೆ ಬಂದು ಹೋಗುತ್ತಿದ್ದ. ಒಂದುದಿನವೂ ನೋಡಲು ಬರಲಿಲ್ಲ. ಆದಿನ ಇಂಗ್ಲೆಂಡಿಗೆ ತಂತಿ ಕಳುಹಿಸಿ ಕೊಟ್ಟನಂತೆ. ಹಿಂದೆಯೇ ಅವರಿಗೆ ಏನೇನೋ ಕಾಗದ ಬರೆದಿದ್ದನಂತೆ. ಆ ಹೊತ್ತಿಗೆ ಅವರೂ ಕಂಪನಿಯ ಡೈರೆಕ್ಟರಾಗಿದ್ದರು. ನನ್ನ ತಂದೆ ಅವರ ಕೈಕೆಳಗಿನ ಅಧಿಕಾರಿ. ಅವರು ಒಡನೆಯೇ ಬೇಕಾದಷ್ಟು ಹಣ ತಂತಿಯ ಮೂಲಕವೇ ಕಳುಹಿಸಿಕೊಟ್ಟರಂತೆ. ನಮ್ಮ ತಂದೆ ಅದನ್ನು ಸಾಲಕ್ಕೆ ಉಪಯೋಗಿಸಿಕೊಂಡುಬಿಟ್ಟ. ಅದರಿಂದ ನನ್ನ ಅಣ್ಣನಿಗೂ ತಂದೆಗೂ

ಮಾತೂಕತೆನಡೆದು ನನ್ನ ಅಣ್ಣ ತಂದೆಯ ಮನೆಯನ್ನು ಬಿಟ್ಟುಬಿಟ್ಟು ಬೇರೆಯಾದನಂತೆ. ನನಗೆ ಮಗುವಾದ ಸಂಗತಿ ಕಾಲೋನಿಯಲ್ಲೆಲ್ಲಾ ಹರಡಿದ್ದಿತಂತೆ. ಆ ಅವಮಾನವನ್ನು ಸಹಿಸಲಾರದೆ ನನ್ನ ತಾಯಿ ಪ್ರಾಣವನ್ನು ಬಿಟ್ಟಳಂತೆ. ತಂದೆ ಕೆಲಸವನ್ನು ಬಿಟ್ಟುಬಿಟ್ಟನಂತೆ. ಮೊದಲೇ ಕುಡುಕ. ಎಲ್ಲಿಗೆ ಹೋದನೋ ಎನ್ನುವುದು ಮೊನ್ನೆ ಮೊನ್ನೆಯವರಿಗೂ ಒಬ್ಬರಿಗೂ ಗೊತ್ತಿರಲಿಲ್ಲ. ಕೆಲವು ವರ್ಷಗಳ ಕೆಳಗೆ ಅವನು ಮಲಯ ದ್ವೀಪದಲ್ಲಿ ಅವನ ಸ್ನೇಹಿತ ಒಬ್ಬ ಪ್ಲಾಂಟರ ಬಳಿ ಇದ್ದನೆಂತಲೂ ಅಲ್ಲೇ ತೀರಿಕೊಂಡನೆಂತಲೂ ವರ್ತಮಾನ ಬಂತು."

ಬೆಟ್ಸಿ ಮತ್ತೆ ಒಂದು ಸಿಗರೇಟನ್ನು ಹಚ್ಚಿಸಿಕೊಂಡಳು.

"ನಿನ್ನಮಗು ಈಗ ಎಲ್ಲಿದೆ?" ಎಂದು ಕೇಳಿದೆ.

ಬೆಟ್ಸಿ ಹೇಳತೊಡಗಿದಳು.

"ನನ್ನ ಕತೆ ಇಲ್ಲಿಗೇ ಮುಗಿದಿಲ್ಲ. ನನ್ನ ಮಗ ಈಗ ಇಲ್ಲಿ ಬಾಲ್ಡ್ವಿನ್ ಹೈಸ್ಕೂಲಿನಲ್ಲಿ ಓದುತ್ತಿದ್ದಾನೆ. ಇಂದಿಗೂ ಅವನಿಗೆ ನಡೆದ ಸಂಗತಿಯೊಂದೂ ತಿಳಿದಿಲ್ಲ. ಏನೂ ಅರಿಯದ ಹಸುಗೂಸು."

ಬೆಟ್ಸಿ ಸ್ವಲ್ಪ ಹೊತ್ತು ಮೌನವಾಗಿದ್ದಳು. ಮತ್ತೆ ಆರಂಭಿಸಿದಳು.

"ಮಗುವಿನ ತಂದೆ ನಿಜವಾಗಿಯೂ ದೊಡ್ಡಮನುಷ್ಯರು. ನಾನು ಆಂಗ್ಲೇಯ ತಾಯಿತಂದೆಗಳಿಗೆ ಹುಟ್ಟಿದವಳಾದರೂ ನಾನು ಪ್ರೀತಿಸಿದ ಆತನೂ ಆಂಗ್ಲೇಯನಾದರೂ ನನ್ನ ಕುವರನೂ ಆಂಗ್ಲ ತನುಜನಾದರೂ ನನಗೆ ಆಂಗ್ಲೇಯರಲ್ಲಿ ಅಷ್ಟು ಮಮತೆಯಿಲ್ಲ. ನನ್ನ ಕಷ್ಟದಲ್ಲಿ ನನ್ನ ವಿಷಯದಲ್ಲಿ ನಾಲ್ಕು ಒಳ್ಳೆಯ ಮಾತನಾಡಿದವರು ಹಿಂದೂಗಳು. ಬಳಿನಿಂತು ಕಾಪಾಡಿದವಳು ಆ ಹಿಂದೂ ಮಹಾತಾಯಿ, ಹಿಂದೂ ಸ್ತ್ರೀ; ಕರುಣಾಮೂರ್ತಿ."

"ಮಾನವನ ಧರ್ಮ ಎಲ್ಲೆಲ್ಲಿಯೂ ಒಂದೇ. ಎಲ್ಲರಲ್ಲಿಯೂ ಕರುಣಾಮೂರ್ತಿಗಳಿರುತ್ತಾರೆ" ಎಂದೆ. ಆಕೆ ನನ್ನ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಮುಂದಕ್ಕೆ ಹೇಳತೊಡಗಿದಳು.

"ಆತನದೊಂದೂ ತಪ್ಪಿಲ್ಲ. ಆತನಿಗೆ ನಾನು ಮದುವೆಮಾಡಿಕೊಳ್ಳಬೇಕೆಂದಿದ್ದೆನೆಂದೂ ಒಂದು ದಿನವೂ ಸೂಚಿಸಿರಲಿಲ್ಲ. ಆತನೂ ಆ

ಸುದ್ದಿಯನ್ನು ಎತ್ತಿರಲಿಲ್ಲ. ನನ್ನನ್ನೂ ಇತರ ಆಂಗ್ಲೋ ಇಂಡಿಯನ್ ಹುಡುಗಿಯರ ಹಾಗೆಂದು ತಿಳಿದಿರಬೇಕು. ನಾನು ಗರ್ಭಿಣಿಯಾದದ್ದು ಅವರಿಗೆ ಅವರ ಮದುವೆಯ ಮೊದಲೇ ತಿಳಿದಿದ್ದರೆ ಅವರು ಖಂಡಿತ ನನ್ನ ಕೈಬಿಡುತ್ತಿರಲಿಲ್ಲ. ಬೇರೆ ಮದುವೆಯಾಗುತ್ತಿರಲಿಲ್ಲ. ಅದು ಅವರ ಮುಂದಿನ ಪತ್ರಗಳಿಂದ ತಿಳಿಯಿತು. ಇಲ್ಲಿನ ವಿಷಯ ಅವರಿಗೆ ತಿಳಿದ ಮೇಲೆ ಅವರು ಬಹಳ ಮರುಗಿದ್ದಾರೆ. ನಮ್ಮ ತಂದೆ ತಾಯಿಯರ ವಿಷಯ ಅವರಿಗೆ ತಿಳಿದಮೇಲೆ ಅವರು ಅಲ್ಲಿಂದ ಪ್ರತಿ ತಿಂಗಳಲ್ಲಿಯೂ ಹಣವನ್ನು ನನಗೇ ಕಳುಹಿಸಿಕೊಡುತ್ತಿದ್ದರು. ಈ ಮಗುವನ್ನೂ ಅವರ ಇತರ ಮಕ್ಕಳಂತೆ ಒಂದನ್ನಾಗಿ ಭಾವಿಸಿದ್ದರು. ಹಿಂದೂದೇಶಕ್ಕೆ ಮರಳಿ ಬರಬೇಕೆಂದು ತವಕಪಡುತ್ತಿದ್ದರು. ಆದರೆ ವಿಧಿವಿಲಾಸ ಬೇರೆಯಿತ್ತು. ಯುದ್ಧ ಆರಂಭವಾದಾಗ ಅವರು ಸೈನ್ಯದಲ್ಲಿ ಅಧಿಕಾರ ವಹಿಸಬೇಕಾಯಿತು. ಡನ್‌ಕ್ರಿಕ್ಕಿನಲ್ಲಿ ಅವರು ತನ್ನ ದೇಶಕ್ಕೋಸ್ಕರ ಪ್ರಾಣವನ್ನು ಮುಡುಪಿಟ್ಟುಬಿಟ್ಟರು. ಅಂದಿನಿಂದ ನನಗೆ ಬರುತ್ತಿದ್ದ ಹಣ ನಿಂತು ಹೋಯಿತು. ಮದ್ರಾಸಿನಿಂದ ಮಗುವಿನೊಡನೆ ಹಿಂತಿರುಗಿ ಬಂದಮೇಲೆ ನಾನೂ ನನ್ನ ಅಣ್ಣನೂ ಕಾಕ್ಸ್‌ಟೌನಿನಲ್ಲಿ ಒಂದು ಬಂಗಲೆಯನ್ನು ತೆಗೆದುಕೊಂಡು ಅಲ್ಲಿ ಮಗುವನ್ನು ಬೆಳೆಸುತ್ತಾ ಬಂದಿದ್ದೆವು. ಆಮೇಲೆ ಮಗುವನ್ನು ಬಾಲ್ಡ್‌ವಿನ್ ಸ್ಕೂಲಿಗೆ ಸೇರಿಸಿದ್ದೆ. ಅಲ್ಲೇ ಅವನಿಗೆ ಊಟದ ವಸತಿಗೆ ಏರ್ಪಾಡು ಮಾಡಿದ್ದೆ."

"ನಿಮ್ಮ ಅಣ್ಣ ಯಾವಾಗ ಸೈನ್ಯಕ್ಕೆ ಸೇರಿಕೊಂಡ?"

"ಇನ್ನು ನಮ್ಮ ಅಣ್ಣನ ಕತೆಯನ್ನು ಹೇಳುತ್ತೇನೆ. ಕೇಳಿ. ನಮ್ಮ ಅಣ್ಣನದು, ಪಾಪ! ಬಹಳ ನೊಂದಜೀವ. ಎಳೆಯ ಹುಡುಗನಾಗಿದ್ದಾಗ ನಮ್ಮ ತಾಯಿತಂದೆಗಳು ಅವನಿಗೆ ಸರಿಯಾಗಿ ವ್ಯಾಸಂಗ ಮಾಡಿಸಲಿಲ್ಲ. ಆಂಗ್ಲತನದ ಅಭಿಮಾನ ಬೇರೆ. ಇತರ ಹುಡುಗರೊಂದಿಗೆ ಅವನನ್ನು ಕಳುಹರು. ಆಂಗ್ಲರಂತೆ ವ್ಯಾಸಂಗ ಕೊಡಲು ಚೈತನ್ಯ ಇಲ್ಲ. ನಮ್ಮ ತಾಯಿ ಅವನನ್ನು ಅವನ ಸೋದರಮಾವನ ಬಳಿಗೆ ಲಂಡನ್ನಿಗೆ ಕಳುಹಿಸಿ ಕೊಡುತ್ತೇನೆ ಎಂದು ಹೇಳುತ್ತಿದ್ದಳು. ಆ ಸೋದರಮಾವ ಬರೀ ಊಹಾ ವ್ಯಕ್ತಿಯೋ ಏನೋ. ಅಂತೂ ನಮ್ಮ ಅಣ್ಣನಿಗೆ ಬಾಲ್ಯದಲ್ಲಿ ಸುಖವಿಲ್ಲ.

ಆಮೇಲೆ ಕೆಲಸಕ್ಕೆ ಸೇರಿಕೊಂಡ. ದುಡಿತ! ಮನೆಯಲ್ಲಿ ಸುಖವಿಲ್ಲ; ಹೊರಗೆ ಸುಖವಿಲ್ಲ. ನಾನು ಮದ್ರಾಸಿನಿಂದ ನನ್ನ ಮಗುವಿನೊಂದಿಗೆ ಹಿಂತಿರುಗಿ ಬಂದು ಕಾಕ್ಸ್‌ಟೌನಿನಲ್ಲಿ ಮನೆ ಮಾಡಿದಮೇಲೆ ಕೆಲವುದಿನ ಅವನಿಗೆ ಸುಖ ಸಂತೋಷ ಲಭಿಸಿತ್ತು. ನೆರೆಹೊರೆಯಲ್ಲಿದ್ದ ಆಂಗ್ಲೋ ಇಂಡಿಯರ್ನ ಹುಡುಗಿಯರ ಪೈಕಿ ಒಬ್ಬಳನ್ನು ಕೈಹಿಡಿದ. ಅವಳು ಬಹಳ ಲಕ್ಷಣವಾಗಿದ್ದಳು. ಆದರೆ ಅವಳು ವೇಷಭೂಷಣಗಳಿಗೆ ವಿಶೇಷ ಖರ್ಚು ಮಾಡಿಬಿಡುತ್ತಿದ್ದಳು. ಅವನು ತರುತ್ತಿದ್ದ ಸಂಬಳವೆಲ್ಲವೂ ಅದಕ್ಕೇ ಆಗಿ ಹೋಗುತ್ತಿತ್ತು. ಅವಳ ಸ್ವಭಾವ ಯಾವಾಗಲೂ ಮಜ ಮಾಡಿಕೊಂಡಿರುವುದು. ವಿಪರೀತ ಸಿಗರೇಟು ಸೇದುತ್ತಿದ್ದಳು. ನನಗೆ ಆಗ ಸಿಗರೇಟಿನ ಅಭ್ಯಾಸವಿರಲಿಲ್ಲ. ಅವಳ ಯಾವ ವರ್ತನೆಗೂ ನಾನು ಅಡ್ಡಿ ಬರುತ್ತಿರಲಿಲ್ಲ. ನನ್ನ ಮಗು ಅವಳನ್ನೆಲ್ಲಿ ಅನುಕರಿಸೀತೆಂದು ಸ್ವಲ್ಪ ಅವನು ದೊಡ್ಡವನಾದೊಡನೆಯೇ ಬೋರ್ಡಿಂಗ್ ಸ್ಕೂಲಿಗೆ ಸೇರಿಸಿಬಿಟ್ಟೆ. ಮನೆಯ ಇತರ ಆಡಳಿತವನ್ನೆಲ್ಲಾ ನಾನೇ ನೋಡಿಕೊಂಡು ಹೋಗುತ್ತಿದ್ದೆ. ಅಣ್ಣ ಅತ್ತಿಗೆ ಸೌಖ್ಯವಾಗಿರಬೇಕು. ಅಷ್ಟೇ ನನಗೆ ಬೇಕಾಗಿದ್ದದ್ದು. ಆಕೆಗೆ ತಳುಕಿನ ಮೋಹದ ವಿನಹ ಇನ್ನಾವ ಕೆಟ್ಟಚಾಳಿಯೂ ಆಗ ಅವಳಲ್ಲಿರಲಿಲ್ಲ.

"ಯುದ್ಧ ಮೊದಲಾಯಿತು. ಡನ್‌ಕ್ರಿಕ್ಕಿನಲ್ಲಿ ನನ್ನ ಯಜಮಾನರ ಸ್ಥಿತಿ ಹಾಗಾಯಿತು. ಹಣ ಬರುತ್ತಿದ್ದದ್ದು ನಿಂತುಹೋಯಿತು. ಅಣ್ಣನ ಸಂಭಳದಲ್ಲಿ ಸಂಸಾರ ನಿರ್ವಹಿಸಬೇಕಾಯಿತು. ಅತ್ತಿಗೆಯ ರೀತಿ ಬದಲಾಯಿಸಿತು. ಮಾತಿಗೆ ಮುಂಚೆ ನನ್ನ ಮೇಲೆ ರೇಗುವುದಕ್ಕೆ ಮೊದಲು ಮಾಡಿದಳು. ನನಗೆ ಮನೆಯಲ್ಲಿರುವುದು ಬಹಳ ಕಷ್ಟವಾಯಿತು. ಅಷ್ಟರಲ್ಲಿ ಒಂದು ದೈನಂದಿನ ಪತ್ರಿಕೆಯ ಜಾಹೀರಾತನ್ನು ಕಂಡೆ. ಅರ್ಜಿ ಹಾಕಿಕೊಂಡೆ. ಒಬ್ಬ ಶ್ರೀಮಂತ ವೃದ್ಧೆಯ ಬಳಿ ಕಂಪಾನಿಯರ್ನ ಆಗಿರುವ ಕೆಲಸ ಸಿಕ್ಕಿತು. ಅಲ್ಲಿಗೆ ಹೋಗಿದ್ದುಬಿಟ್ಟೆ. ಆಕೆ ಬಹಳ ಒಳ್ಳೆಯವಳು. ಆದರೆ ಸಿಡುಕು. ಅಲ್ಲೇ ಹೆಚ್ಚುಕಾಲ ತಳ್ಳುತ್ತಿದ್ದೆ. ಇತ್ತ ನಮ್ಮ ಮನೆಯಲ್ಲಿ ನಮ್ಮ ಅತ್ತಿಗೆಯೇ ರಾಣಿ. ಅವಳು ಆಡಿದ್ದೇ ಆಟ. ಒಂದು ವರ್ಷದ ಹಿಂದೆ ನಮ್ಮ ಅಣ್ಣ ಕೆಲಸಮಾಡುತ್ತಿದ್ದ ಕಂಪನಿಯಲ್ಲಿ

ಮೋಟರುಗಳ ಮಾರಾಟ ನಿಂತಿತು. ಹೊಸ ಮೋಟರುಗಳೇ ಹಿಂದೂ ದೇಶಕ್ಕೆ ಬರುತ್ತಿರಲಿಲ್ಲ. ಆ ಕಂಪನಿಯವರು ನಮ್ಮ ಅಣ್ಣನಿಗೆ ಬೇರೆಕಡೆ ಕೆಲಸ ನೋಡಿಕೊಳ್ಳಲು ಹೇಳಿಬಿಟ್ಟರು. ಮನೆಗೆ ಬಂದು ಹೆಂಡತಿಗೆ ಸುದ್ದಿ ಹೇಳಿದ. ನನಗೂ ವಿಚಾರ ತಿಳಿಯಿತು. ನನ್ನ ಮಗನಿಗೆ ಎಷ್ಟು ಬೇಕೋ ಅಷ್ಟು ದುಡ್ಡನ್ನು ಇಟ್ಟುಕೊಂಡು ಎಲ್ಲವನ್ನೂ ಮನೆಯ ಖರ್ಚಿಗೆ ಕೊಟ್ಟು ಬಿಡುತ್ತಿದ್ದೆ. ಅಣ್ಣ ಕೆಲಸಕ್ಕಾಗಿ ಅಲೆಯುತ್ತಿದ್ದ. ಸೈನ್ಯಕ್ಕೆ ಸೇರಿಬಿಟ್ಟರೆ ಇಲ್ಲಿ ಹೆಂಡತಿಯ ಗತಿ!

"ಅವನು ಸೈನ್ಯಕ್ಕೆ ಸೇರುವ ಮೊದಲೇ ಹೆಂಡತಿಯ ಗತಿ ಆಯಿತು. ಮೋಟರು ಮಾರಾಟದ ವ್ಯವಹಾರದಲ್ಲಿ ಅನೇಕರು ಅವನ ಮನೆಗೆ ಬಂದು ಹೋಗಬೇಕಾಗಿತ್ತು. ಈತನೂ ಅನೇಕರನ್ನು ಅನುಸರಿಸಬೇಕಾಗಿತ್ತು. ಸ್ನೇಹಿತರೊಂದಿಗೆ ಮನೆಯಲ್ಲಿ ಮಾತನಾಡುತ್ತಾ ಕುಳಿತಿರುವಾಗ ಇನ್ನ್ಯಾರಾದರೂ ಮೋಟರ ಗಿರಾಕಿ ಬಂದರೆ ಒಡನೆಯೇ ಹೊರಗೆ ಹೋಗ ಬೇಕಾಗಿತ್ತು. 'ನನ್ನ ಹೆಂಡತಿ ತಮ್ಮೊಡನೆ ಮಾತನಾಡಿಕೊಂಡಿರುತ್ತಾಳೆ. ನಾನೀಗಲೇ ಬಂದುಬಿಡುತ್ತೇನೆ' ಎಂದು ಹೇಳಿ ಅವಳೊಡನೆ ಸ್ನೇಹಿತ ರನ್ನು ಬಿಟ್ಟು ಹೊರಟುಹೋಗುತ್ತಿದ್ದ.

"ಒಂದು ದಿನ ಅವನು ಮನೆಗೆ ಹಿಂತಿರುಗಿ ಬಂದಾಗ ಆಕೆ ಮನೆ ಯಲ್ಲಿರಲಿಲ್ಲ. ಒಬ್ಬ ಅಮೆರಿಕನ್ ಇಂಜಿನಿಯರ್ ಜೊತೆಯಲ್ಲಿ ಅವರ ಮನೆಗೆ ಹೋಗಿರುವುದಾಗಿ ಕಾಗದ ಬರೆದಿಟ್ಟು ಹೋಗಿದ್ದಳು. ಅವನು ಆ ಅಮೆರಿಕನ್ ಇಂಜಿನಿಯರ್ ಮನೆಗೆ ಹೋದ. ಅವರು ಅವನನ್ನು ಬರಮಾಡಿಕೊಂಡು ಟೀ ಕೊಟ್ಟರು. ಹೆಂಡತಿಯೊಡನೆ ಹಿಂತಿರುಗೋಣ ಹೊತ್ತಾಯಿತು ಎಂದ. ಆಕೆ ಹೇಳಿದಳು—ನಾನು ಇಲ್ಲೇ ಇದ್ದು ಬಿಡು ತ್ತೇನೆ. ಈಗ ನಿಮಗೆ ಸೌಖ್ಯ ಇಲ್ಲ. ನನ್ನ ಖರ್ಚಿನ ಭಾರ ನಿಮ್ಮಮೇಲೆ ಹಾಕಲು ಮನಸ್ಸಿಲ್ಲ. ಈತ ನನ್ನ ಭಾರವನ್ನೆಲ್ಲಾ ವಹಿಸುತ್ತಾನಂತೆ. ತಮಗೆ ಮತ್ತೆ ಕೆಲಸ ದೊರೆತಮೇಲೆ ಹಿಂತಿರುಗಿ ಬರುತ್ತೇನೆ ಎಂದು ಬಿಟ್ಟಳು. ಕೋಪಮಾಡಿಕೊಳ್ಳಬೇಡಿ, ಮನಸ್ಸಿಗೆ ಏನೂ ತಿಳಿದುಕೊಳ್ಳ ಬೇಡಿ ಎಂದುಹೇಳಿ ಅವನಿಗೆ ಮುತ್ತಿಟ್ಟು ಕಳುಹಿಸಿಕೊಟ್ಟುಬಿಟ್ಟಳು. ಅವನು ಪೆಚ್ಚುಮೋರೆ ಹಾಕಿಕೊಂಡು ಮನೆಗೆ ಹಿಂತಿರುಗಿದ.

"ಇದೇ ನಮ್ಮ ಜನಕ್ಕೂ ನಿಮ್ಮ ಹಿಂದೂ ಸ್ತ್ರೀಯರಿಗೂ ಇರುವ ವ್ಯತ್ಯಾಸ. ನಿಮ್ಮಲ್ಲಿ ಗಂಡಹೆಂಡರ ಮದುವೆ. ಆತ್ಮಗಳ ಸಮ್ಮೇಳನ. ಗಂಡ ಅಧಿಕಾರಿಯಾಗಿ ಶ್ರೀಮಂತನಾಗಿರಲಿ, ಬಡತನಕ್ಕೆ ಬೀಳಲಿ ಹೆಂಡತಿ ನೆರಳಿನಹಾಗೆ ಅನುಸರಿಸುತ್ತಾಳೆ. ನಮ್ಮವರ ಗಂಡಹೆಂಡರ ಮಿಳನ ಈಗ ಬಾಹ್ಯದಲ್ಲಿ ಮಾತ್ರ. ನಿಮ್ಮಲ್ಲಿ ಗಂಡನಿಗೆ ಕೆಲಸ ಹೋದರೆ ಗಂಡ ಕೆಲಸ ಮಾಡಲು ಕೈಗೆ ಗುದ್ದಲಿ ತೆಗೆದುಕೊಂಡರೆ ಹೆಂಡತಿ ಒಡನೆ ಮಣ್ಣನ್ನು ಹೊರಲು ಮಕ್ಕರಿ ತೆಗೆದುಕೊಂಡು ಸಿದ್ಧಳಾಗುತ್ತಾಳೆ. ನಮ್ಮವರ ದೃಷ್ಟಿಯೇ ಬೇರೆ. ಅಣ್ಣನಬಾಳು ಹಾಗಾಯಿತು. ಅನಂತರ ಅವನು ವಿವಾಹವಿಚ್ಛೇದನಕ್ಕೆ ಅರ್ಜಿ ಹಾಕಿ ಸೈನ್ಯಕ್ಕೆ ಸೇರಿಕೊಂಡು ಆಫ್ರಿಕಾಕ್ಕೆ ಹೋಗಿ ಅಲ್ಲಿ ಶತ್ರುಗಳ ಕೈಸೆರೆಯಾಗಿಬಿಟ್ಟ. ಅತ್ತಿಗೆ ಅಮೆರಿಕನ್ ಇಂಜಿನಿಯರ್ ಮನೆಯಲ್ಲಿ ಸ್ಥಿರವಾಗಿ ನಿಂತುಬಿಟ್ಟಳು."

"ನೀನೀಗ ಆ ಶ್ರೀಮಂತ ವೃದ್ಧೆಯ ಕಂಪಾನಿಯನ್ ಆಗಿಯೇ ಇದ್ದೀಯಾ?"

"ನನ್ನ ಕತೆ ಇನ್ನೂ ಇಷ್ಟಕ್ಕೇ ಮುಗಿಯಲಿಲ್ಲ. ನಾನು ಆ ಶ್ರೀಮಂತವೃದ್ಧೆಯ ಕಂಪಾನಿಯನ್ ಆಗಿದ್ದೆ. ಒಂದುದಿನ ಹೊತ್ತಾಗಿ ಅವಳ ಮನೆಯಿಂದ ನಮ್ಮ ಮನೆಯಕಡೆಗೆ ಬರುತ್ತಿದ್ದೆ. ಕೆಲವು ಸಿಪಾಯಿಗಳು ನನ್ನನ್ನು ಹಿಂಬಾಲಿಸಿದರು. ಎಲ್ಲರೂ ಕುಡಿದುಬಿಟ್ಟಿದ್ದರು. ನನಗೆ ದಿಗಿಲಾಯಿತು. ಜಾಗ್ರತೆ ಹೆಜ್ಜೆ ಹಾಕಿದೆ. ಅವರೂ ಕೇಕೆ ಹಾಕುತ್ತಾ ನನ್ನನ್ನು ತಡೆಗಟ್ಟಲು ಬಂದರು. ನನಗೆ ದಿಕ್ಕೇ ತೋಚ ದಂತಾಯಿತು. ಕಾಲು ಕುಸಿದುಬಿದ್ದಿತು. ಅಲ್ಲೊಂದು ಮಿಲಿಟರಿ ಆಫೀಸರ ಕಾರು ನಿಂತಿತ್ತು. ಅದರ ಹಿಂದಿನ ಬಾಗಿಲನ್ನು ತೆರೆದು ಅದರಲ್ಲಿ ಕುಳಿತುಬಿಟ್ಟೆ. ಅವರು ಆ ಕಾರನ್ನು ಗುರ್ತಿಸಿ ಹಿಂದಕ್ಕೆ ಸರಿದು ನಿಂತು ಬಿಟ್ಟರು. ನನ್ನ ಪ್ರಾಣವನ್ನು ಬಿಗಿಯಾಗಿ ಹಿಡಿದುಕೊಂಡು ಅದರಲ್ಲಿಯೇ ಕುಳಿತುಬಿಟ್ಟಿದ್ದೆ. ಮಿಲಿಟರಿ ಆಫೀಸರು ಬಂದು ಮುಂದೆ ಕುಳಿತು ಕಾರನ್ನು ಬಿಟ್ಟುಕೊಂಡು ಹೊರಟರು. ಸ್ವಲ್ಪದೂರ ಹೋಗುವುದರೊಳಗಾಗಿ ನಾನು ಹಿಂದೆ ಇರುವುದು ಆತನಿಗೆ ತಿಳಿಯಿತು. ಆತ ಕಾರನ್ನು ನಿಲ್ಲಿಸಿ ಹಿಂದೆ ಬಂದು ನನ್ನನ್ನು ಹಿಡಿದುಕೊಂಡು ನಾನು ಗೂಢಚಾರಳಿರ

ಬೇಕೆಂದು ಭಾವಿಸಿ ನನ್ನನ್ನು ಪೋಲೀಸರ ವಶಕ್ಕೆ ಕೊಡಬೇಕೆಂದಿದ್ದನು. ನಾನು ನಡೆದ ಸಂಗತಿಯನ್ನು ಹೇಳಿದೆ. ನನ್ನ ವಿಳಾಸ, ನನ್ನ ಯಜಮಾನರ ವಿಷಯ, ಎಲ್ಲವನ್ನೂ ತಿಳಿಸಿದೆ. ಆತನಿಗೆ ಇಂಗ್ಲೆಂಡಿನಲ್ಲಿ ನನ್ನ ಯಜಮಾನರ ಪರಿಚಯವಿತ್ತಂತೆ. ನೇರಾಗಿ ನನ್ನನ್ನೊಂದು ಹೊಟೇಲಿಗೆ ಕರೆದುಕೊಂಡು ಹೋದ. ಅಲ್ಲಿ ನಮ್ಮಿಬ್ಬರಿಗೂ ತಿಂಡೀ ತೀರ್ಥಗಳನ್ನು ತರಿಸಿದ. ಆ ಹೊತ್ತಿನಲ್ಲಿ ನನ್ನ ಮತಿ ನನ್ನ ಕೈಬಿಟ್ಟಿತ್ತು. ಅವನ ಇಷ್ಟಕ್ಕೆ ವಿರೋಧವಾಗಿ ವರ್ತಿಸಲಾಗಲಿಲ್ಲ. ಅಲ್ಲಿಂದ ಈ ಪಾರ್ಕಿಗೆ ಬಂದೆವು. ಸರಿರಾತ್ರಿಯವರಿವಿಗೂ ಇಲ್ಲೇ ಕಳೆದೆವು. ಮೊದಲು ನನ್ನ ಯಜಮಾನರಿಗೆ ನನ್ನ ದೇಹ ಆತ್ಮಸಮರ್ಪಣಮಾಡಿದ್ದು ಇಲ್ಲಿಯೇ. ಇಲ್ಲಿ ದೋಣಿಯಲ್ಲಿ ಕುಳಿತು ಆ ದ್ವೀಪಗಳಿಗೆ ತೆರಳಿದ್ದೆವು. ಅದು ಸುಖದ ದಿನ. ನನ್ನ ದೇಹ, ಆತ್ಮ ಅವರಲ್ಲಿ ಸಮರ್ಪಣ ಮಾಡಿದಾಗ ಮುಂದೆ ಹರುಷದ ದಿನಗಳನ್ನು ಬಯಸಿದ್ದೆ. ಅವರು ಕೈಹಿಡಿದು ಬಾಳನ್ನು ಬೆಳಗಿಸುವೆನೆಂದಿದ್ದೆ. ಆದರೆ ಆ ಸುಖಸಮಯದಲ್ಲಿ ನನ್ನ ಇಷ್ಟವನ್ನು ಅವರಲ್ಲಿ ಬಿತ್ತರಿಸದೆ ಹೋದೆ. ಅದರ ಫಲ ಅನುಭವಿಸಬೇಕಾಯಿತಷ್ಟೆ. ಆದರೆ ನಾನು ಎಷ್ಟೋ ಜನರಿಗಿಂತ ಪುಣ್ಯಶಾಲಿಯಾಗಿದ್ದೆ. ಅವರು ನನ್ನನ್ನೂ ನನ್ನ ಮಗುವನ್ನೂ ಸಲಹುತ್ತಾ ಬಂದಿದ್ದರು. ವಿರಹವ್ಯಥೆಯೊಂದಿದ್ದಿತ್ತಷ್ಟೆ! ಅವರ ಕುರುಹಾಗಿ ಮಗುವಿತ್ತು. ಈಗ ಇನ್ನೊಬ್ಬರಿಗೆ ದೇಹ ತೆತ್ತು ಬಿಟ್ಟದ್ದಾಯಿತು. ಆತ ನನ್ನನ್ನು ರಾತ್ರಿ ಮನೆಯಬಳಿ ಬಿಟ್ಟು ಹೋದ. ಹಗಲು ಎದ್ದಾಗ ನನ್ನ ವಿಷಯದಲ್ಲಿಯೇ ನನಗೆ ಜುಗುಪ್ಸೆಯುಂಟಾಯಿತು. ಮೈ ತೂಕವಾಗಿ ಕಂಡಿತು. ಆ ಸಿಪಾಯಿಗಳಿಗೂ ಈ ಆಫೀಸರಿಗೂ ಒಟ್ಟಿನಲ್ಲಿ ಏನೂ ವ್ಯತ್ಯಾಸವಿಲ್ಲ. ಬೆಳಿಗ್ಗೆ ಆ ಶ್ರೀಮಂತ ವೃದ್ಧೆಯ ಮನೆಗೆ ಎಂದಿನಂತೆ ಕೆಲಸಕ್ಕೆ ಹೋದೆ. ಆದರೆ ನನ್ನ ಮನಸ್ಸಿನಲ್ಲಿ ಗೆಲುವಿಲ್ಲ. ಆತ್ಮ ಪಾತಾಳಕ್ಕೆ ಬಿದ್ದುಹೋದಂತಿತ್ತು. ಅಲ್ಲಿ ಅದೇ ಸಿಪಾಯಿಗಳಿದ್ದರು. ಆ ಮನೆಗೆ ಬಂದು ಗಲಾಟೆಮಾಡಿದರು. ಪೋಲೀಸರನ್ನು ಕರತರಿಸಬೇಕಾಯಿತು. ಅವರು ಆ ವೃದ್ಧೆಯೊಂದಿಗೆ ನಾನು ಮಿಲಿಟರಿ ಆಫೀಸರೊಂದಿಗೆ ಇದ್ದ ವಿಷಯ ತಿಳಿಸಿಬಿಟ್ಟರು. ನನಗೆ ಅಲ್ಲಿಂದ ಕೆಲಸಕ್ಕೆ ದಕ್ಕಲುಪಟ್ಟಿಯಾಯಿತು. ಆ ಮಿಲಿಟರಿ ಆಫೀಸರಿಗೆ ಫೋನು

ಮಾಡಿ ನಡೆದ ಸಂಗತಿ ತಿಳಿಸಿದೆ. ಆತ ಬಂದು ನನ್ನನ್ನಲ್ಲಿಂದ ಕರೆದು ಕೊಂಡು ಹೋದ. ನನ್ನನ್ನು ಮದುವೆಮಾಡಿಕೊಳ್ಳುವುದಾಗಿ ಹೇಳಿದ. ಪ್ರತಿ ಇರುಳೂ ಈ ಪಾರ್ಕಿಗೆ ಬಂದು ಹೋಗುತ್ತಿದ್ದೆವು. ಆಗಲೂ ನಾನು ನನ್ನ ಎಚ್ಚರಿಕೆಯಲ್ಲಿರಲಿಲ್ಲ. ಒಡನೆ ಮದುವೆಮಾಡಿಕೊಳ್ಳುವಂತೆ ಅವನಿಗೆ ಒತ್ತಾಯಮಾಡಲಿಲ್ಲ. ಮೋಸಹೋದೆ. ಆತ ತನ್ನ ಸೈನ್ಯದೊಂದಿಗೆ ಇನ್ನೆಲ್ಲಿಗೋ ತೆರಳಿಬಿಟ್ಟ. ನನ್ನನ್ನು ಈ ಬಾಳಿಗೆ ಬಿಸುಟುಹೋದ."

ಬೆಟ್ಸಿ ಸುಮ್ಮನೆ ಇದ್ದಳು. ನನಗೂ ಏನನ್ನೂ ಹೇಳಲು ಆಗಲಿಲ್ಲ. ನಾಲ್ಕು ಸಮಾಧಾನದ ಮಾತುಗಳನ್ನು ಆಡಬೇಕು. ಮತ್ತೊಮ್ಮೆ ಸಿಗರೇಟನ್ನು ಹಚ್ಚಿಸಿಕೊಂಡು ಹೇಳಿದಳು "ಈ ಸಿಗರೇಟು, ಇದು, ಈಗ ನನ್ನ ಸಂಗಾತಿ. ಇವಳೊಬ್ಬಳೇ ನನ್ನ ದುಃಖ ಮರೆಸುತ್ತಿರುವವಳು. ಇನ್ನೂ ನಾನು ಕುಡಿತಕ್ಕೆ ಇಳಿದಿಲ್ಲ. ಮುಂದೆ ಎಂತು ಎಸಗುವೆನೋ ಯಾವ ನರಕಕೂಪಕ್ಕೆ ಬೀಳಬೇಕಾಗಿದೆಯೋ ತಿಳಿಯದು" ಎಂದಳು.

"ಯಾವ ನರಕಕೂಪಕ್ಕೂ ನೀನಿನ್ನು ಬೀಳಬೇಕಾಗಿಲ್ಲ. ನಡೆಯ ಬೇಕಾದುದು ನಡೆದುಹೋಯಿತು. ಆದರೆ ಆತ ನಿನ್ನನ್ನು ಕೆಡಿಸಲು ಯತ್ನಿಸಿದಾಗ ನೀನು ತಡೆಗಟ್ಟಬೇಕಾಗಿತ್ತು. ನಿಮಗೆ ಈ ವಿಷಯ ಗಳಲ್ಲಿ ಹಿಂದೂಸ್ತ್ರೀಯರ ಸ್ಥೈರ್ಯ ಧೈರ್ಯ ಇಲ್ಲ. ಹಿಂದೂ ಸ್ತ್ರೀಯರಿಗೆ ಎಲ್ಲದಕ್ಕಿಂತಲೂ ಮಾನ ಹೆಚ್ಚು. ನೀನಾಗ ಧೈರ್ಯದಿಂದ ವರ್ತಿಸಿದ್ದರೆ ಏನಾಗಿರುತ್ತಿತ್ತು ಗೊತ್ತೇ? ಒಂದುವೇಳೆ ನಿನ್ನ ಪ್ರಾಣಕ್ಕೆ ಹಾನಿ ಬಂದಿರು ತಿತ್ತೇನೋ. ಒಂದು ಪ್ರಾಣ ಆ ರೀತಿ ಆಹುತಿಯಾಗಿದ್ದರೆ, ಎಷ್ಟು ಜನರ ಮಾನ ಮುಂದೆ ಅದು ಕಾಪಾಡುತ್ತಿತ್ತು! ಆಗ ಆ ಸೈನಿಕರ ಈ ಪೈಶಾಚ ವೃತ್ತಿ ಮಾಯವಾಗುತ್ತಿತ್ತು" ಹೀಗೆ ಹೇಳತೊಡಗಿ ಆಕೆಗೆ ಶ್ರೀನಿವಾಸರ ಚಿಕ್ಕ ಮಲ್ಲಮ್ಮನ ಕತೆಯನ್ನು ಹೇಳಿದೆ. ಅನಂತರ "ನೀನಿನ್ನು ಈ ವೃತ್ತಿಗೆ ತಿಲಾಂಜಲಿಕೊಡು. ನಾನು ನನ್ನ ಸ್ನೇಹಿತ ನರಸಿಂಹಾಚಾ ರ್ಯರಿಗೆ ನಿನ್ನ ವಿಷಯವನ್ನು ಅರುಹುತ್ತೇನೆ. ಅವರ ಸೇನಾನಾಯಕರು ಒಳ್ಳೆಯವರು. ಅವರ ಮಡದಿಗೆ ಈಗೊಂದು ಕೂಸಿದೆ. ಮಡದಿಯ ಕಂಪಾನಿಯನ್ ಆಗಿ ಕೂಸನ್ನು ನೋಡಿಕೊಳ್ಳುವ ಆಂಗ್ಲ ತರುಣಿ ಬೇಕೆಂದು ಹಿಂದೆ ಹೇಳಿದ್ದಹಾಗೆ ನನಗೆ ನೆನಪಿದೆ. ನಿನ್ನನ್ನು ಅಲ್ಲಿ

ಸೇರಿಸಲು ಯತ್ನಿಸುತ್ತೇನೆ. ನರಸಿಂಹಾಚಾರ್ಯರು ಸಹಾಯಮಾಡು ತ್ತಾರೆ. ಅಲ್ಲಿ ಅವರ ಘಾತು ನಡೆಯುತ್ತೆ. ಎಲ್ಲವೂ ಸರಿಹೋಗುವುದು. ನಾಳೆನಾಡಿದ್ದರಲ್ಲಿ ನನ್ನನ್ನು ಇಲ್ಲಿ ಕಾಣು." ಎಂದು ಹೇಳಿ ಆಕೆಯನ್ನು ಬೀಳ್ಕೊಟ್ಟು ಮನೆಯಕಡೆಗೆ ತೆರಳಿದೆ.

ರಾತ್ರಿ ಸರಿಯಾಗಿ ನಿದ್ರೆ ಬರಲಿಲ್ಲ. ರಾತ್ರಿಯೆಲ್ಲಾ ಆಕೆಯ ಯೋಚನೆ. ರತ್ನದಂತಹ ಹೆಂಗಸು! ಆಕೆಯ ಬಾಳು ಏನಾಗಿಬಿಟ್ಟಿದೆ! ಅವಳಿಗೆ ಸಮಾಧಾನೋಕ್ತಿ ಹೇಳಲು ಹೋಗಿ ಕಠಿಣವಾಗಿ ಬೇರೆ ಮಾತ ನಾಡಿಬಿಟ್ಟಿದ್ದೇನೆ. ನನ್ನ ಮಾತಿನಲ್ಲಿ ಈಗ ನೀನು ಪ್ರಾಣಬಿಡುವುದು ಮೇಲು; ಪ್ರಾಣಕ್ಕಿಂತ ಮಾನ ಹೆಚ್ಚು ಎಂದು ತೋರಿರುತ್ತೆ. ಆಕೆ ಏನುಮಾಡಿಯಾಳು? ವಿಧಿಯ ವಶಳಾಗಿದ್ದಾಳೆ. ನನ್ನಮಾತನ್ನು ಮನ ಸ್ಸಿಗೆ ಹಚ್ಚಿಕೊಂಡು ಪ್ರಾಣವೇನಾದರೂ ಕಳೆದುಕೊಂಡುಬಿಟ್ಟರೆ? ಆನಂದರ'ನಾನು ಕೊಂದ ಹುಡುಗಿ'ಯ ಹಾಗೆ ಇದು ಪರಿವರ್ತಿಸಿದರೇ!...

ಮಾರನೇ ದಿನ ನರಸಿಂಹಾಚಾರ್ಯರಿಗೆ ಫೋನು ಮಾಡಿದೆ. ವಿಷಯವನ್ನೆಲ್ಲಾ ಅರುಹಿದೆ. ಅವರ ಸೇನಾನಾಯಕರನ್ನು ಕೆಲಸದ ಸಲುವಾಗಿ ವಿಚಾರಿಸಿರೆಂದು ಹೇಳಿದೆ. ಅವರು "ನಿಮಗೆ ಬುದ್ಧಿಯಿಲ್ಲ. ಯಾತಕ್ಕೆ ಅವಳ ವಿಷಯದಲ್ಲಿ ಅಷ್ಟು ಹಚ್ಚಿಕೊಂಡು ಹೋಗುತ್ತೀರಿ?" ಎಂದರು. "ಹಾಗಲ್ಲಾ...." ಎಂದು ಅವಳ ಪರವಾಗಿ ಬಹಳ ಹೇಳಿದೆ. "ಆಗಲಿ ನಾನು ಸೇನಾನಾಯಕರಿಗೆ ಹೇಳಿರುತ್ತೇನೆ. ಸಂಜೆ ನೀವೇ ಇಲ್ಲಿಗೆ ಬಂದು ಅವರನ್ನು ಕಂಡುಹೋಗಿ" ಎಂದರು. ಸಂಜೆ ನಾನು ಅಲ್ಲಿಗೆ ಹೋದೆ. ಅವರು ಆ ದಿನ ಸಿಕ್ಕಲಿಲ್ಲ. ಮಾರನೆಯ ದಿನ ಸರ್ಕೀಟಿಗೆ ಹೋಗಿಬಿಟ್ಟಿದ್ದರು. ಅವರನ್ನು ಕಾಣಬೇಕಾದರೆ ಮೂರು ದಿನಗಳಾಗಿ ಹೋದವು. ಈ ಮಧ್ಯೆ ನಾನು ಕೆನ್‌ಸಿಂಗ್‌ಟನ್ ಪಾರ್ಕಿನ ಕಡೆಗೆ ಹೋಗಲಿಲ್ಲ. ಡೈಲಿ ಪೋಸ್ಟು ಬಂದೊಡನೆಯೇ ಹಲಸೂರಿನ ಕೆರೆಯಲ್ಲಿ ಹೆಂಗಸು ಆತ್ಮ ಹತ್ಯಮಾಡಿಕೊಂಡಳೆಂಬ ವರದಿ ಯೇನಾದರು ಬಂದು ಬಿಟ್ಟಿದೆಯೇ ಎಂದು ದಿಗಿಲು ದಿಗಿಲಿನಿಂದ ನೋಡುತ್ತಿದ್ದೆ. ಸೇನಾನಾಯಕರನ್ನು ಕಂಡು ಕೆಲಸದ ವಿಷಯದಲ್ಲಿ ಮಾತನಾಡಿದ ಮೇಲೆ ಆಕೆಯನ್ನು ಕಾಣಲು ಅಲ್ಲಿಗೆ ಹೋದೆ. ಆಕೆ

ಇನ್ನೂ ಬಂದಿರಲಿಲ್ಲ. ನರಸಿಂಹಾಚಾರ್ಯರೂ ಬಂದಿರಲಿಲ್ಲ. ಅಲ್ಲಿಗೆ ಹೋಗುವಾಗ ನಟ್ಸ್ ಚಾಕೋಲೇಟಿನ ದೊಡ್ಡ ಪೊಟ್ಟಣವೊಂದನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗಿದ್ದೆ; ಅವಳ ಮಗನಿಗೆ ಅದನ್ನು ತೆಗೆದುಕೊಂಡು ಹೋಗಿ ಕೊಡಲು ಅವಳಿಗೆ ಕೊಡುವುದಕ್ಕೆ. ಸಂಜೆ ಹರಿದು ಮಸಕು ಮಸಕಾಯಿತು. ಬೈಸಿಕಲ್ ಬಂದ ಶಬ್ದವಾಯಿತು. ನೋಡಿದೆ. ಬೆಟ್ಸಿ ಬರುತ್ತಿದ್ದಳು. ಎದ್ದು ನಿಂತೆ. ವಿಷಯ ಅವಳಿಗೆ ಹೇಳಬೇಕು. ಎಲ್ಲವೂ ಸರಿಹೋದರೆ ನಾಳೆಯಿಂದಲೇ ಅವಳನ್ನು ಕೆಲಸದಮೇಲೆ ಕಳುಹಿಸಿಕೊಡಬೇಕು ಎಂದು ಆತುರದಿಂದ ಎದ್ದೆ. ಅವಳ ಹಿಂದೆ ಇನ್ನೊಂದು ಬೈಸಿಕಲ್ ಬಂತು. ಅದರಮೇಲೆ ಬಿಳಿ ಸೇನಾಧಿಕಾರಿಯೊಬ್ಬನಿದ್ದ. ಬೆಟ್ಸಿ ನನ್ನನ್ನು ಗುರ್ತಿಸಿದಳು. ಆದರೆ ಗುರ್ತಿಸಲಿಲ್ಲದ ಹಾಗೆ ನಟಿಸಿ ಮುಂದೆ ನಡೆದಳು. ಇಬ್ಬರು ಬೈಸಿಕಲ್ಲು ಗಳಿಂದ ಇಳಿದು ಅವುಗಳನ್ನು ಮರಕ್ಕೆ ಒರಗಿಸಿ ಕೆರೆಯ ದಂಡೆಯಮೇಲೆ ಕುಳಿತರು. ಗುರ್ತಿಸಿರಲಾರಳು ಪುನಃ ಹೋಗಿ ಮಾತನಾಡಿಸೋಣ ಎಂದುಕೊಂಡು ಅವರಿದ್ದಲ್ಲಿಗೆ ಹೋದೆ. ಆಕೆ ನನ್ನನ್ನು ನೋಡಿಯೂ ನೋಡದವಳ ಹಾಗೆ ಮತ್ತೊಂದುಕಡೆಗೆ ತಿರುಗಿಕೊಂಡಳು. ಬೆಟ್ಸಿಯೋ ಅಲ್ಲವೋ ಎಂಬ ಅನುಮಾನ ಬಂತು. ಮತ್ತೆ ನೋಡಿದೆ. ಹೌದು, ಬೆಟ್ಸಿ ಅವಳು! ಈಕಡೆಗೆ ಹೊರಟು ಬಂದುಬಿಟ್ಟೆ. ನರಸಿಂಹಾಚಾರ್ಯರು ಅಷ್ಟು ಹೊತ್ತಿಗೆ ಬಂದರು. ಆಗ ನಡೆದ ಸಮಾಚಾರವನ್ನು ಅವರಿಗೆ ಹೇಳಿದೆ. “ನಾನು ಮೊದಲೇ ನಿಮಗೆ ಹೇಳಲಿಲ್ಲವೇ? ಡೊಂಕು ಬಾಲಕ್ಕೆ ದೆಬ್ಬೆ ಕಟ್ಟಿದಹಾಗೆ” ಎಂದರು.

ಅವರ ಮಾತು ಸ್ವಲ್ಪ ಕಡಾಖಂಡಿತ. ಸೋಪಾನದಮೇಲೆ ಕುಳಿತು ಮಾತಿಗೆ ಆರಂಭಿಸಿದೆವು. ಅವರು ಹಿಂದೂ ಸಂಸ್ಕೃತಿ ಮತ್ತು ಆಂಗ್ಲರ ಸಂಸ್ಕೃತಿಯ ವಿಚಾರದಲ್ಲಿ ವ್ಯಾಖ್ಯಾನಕ್ಕೆ ಮೊದಲುಮಾಡಿದರು. ಬೆಟ್ಸಿ ನನಗಾಗಿ ಎರಡು ದಿನಗಳು ಕಾದಿದ್ದಿರ ಬಹುದು. ನಾನು ಬರದೇ ಹೋಗಿದ್ದಕ್ಕೆ ಹತಾಶಳಾಗಿ ಪುನಃ ಆ ವೃತ್ತಿಗೆ ಆರಂಭಿಸಿರ ಬಹುದು. ಅವರು ಮಾತಿನ ಭರದಲ್ಲಿದ್ದಾಗ ನುಸುಳಿಕೊಂಡು ಹೋಗಿ ಚಾಕೋ ಲೇಟಿನ ಪೊಟ್ಟಣವನ್ನು ಅವಳ ಬೈಸಿಕಲ್ಲಿಗೆ ಸಿಕ್ಕಿಸಿ ಬಂದೆ. ನರಸಿಂಹಾ

ಚಾರ್ಯರು ನಾನು ಪಕ್ಕದಲ್ಲಿಯೇ ಇದ್ದೇನೆಂದುಕೊಂಡು ಮಾತನಾಡು ತ್ತಲೇ ಇದ್ದರು. ನಾನು ಹಿಂತಿರುಗಿ ಬಂದಾಗ "ನೋಡಿದಿರಾ ಇದು ಇಂದಿನ ಪಾರ್ಕು! ಈಗ ನಮ್ಮ ದೇಶದ ಸ್ಥಿತಿಯೂ ಹೀಗಾಗುತ್ತಿದೆ." ಎಂದರು.

"ಹೌದು" ಎಂದೆ.

"ಇದು ನಮ್ಮ ದೇಶದಲ್ಲಿ ಬಹಳದಿವಸ ಇರುವುದಿಲ್ಲ. ಈಗ ಪರ್ವಕಾಲ" ಎಂದರು.

"ನಿಜ" ಎಂದೆ.

# ದೋಣಿಯ ಹಾಡು

(ಹಲಸೂರಿನ ಕೆರೆಯಲ್ಲಿ ದೋಣಿಯೊಳು ಕುಳಿತು ಹಾಡಿದ ಒಂದು ಗೀತೆ)

ಹುಟ್ಟು ಹಾಕೂ ಬಾಲೆ
ಹುಟ್ಟ ನನ್ನೊಡನೆ
ಸಾಗಲೀ ದೋಣಿಯಿದು
ಮುಂದು ಮುಂದಕ್ಕೆ

ಆಸೆಗಳು ಕ್ಲೇಶಗಳು
ಮನದಿ ಎಡೆಯಿಡದೆ
ಭವದ ತೆರೆಯನು ತೆರಿಸಿ
ಸರಿಯಲಿ ಮುಂದೆ

ನಿತ್ಯ ಪಯಣವು ನಮ್ಮ
ಬಾಳ ಕಟ್ಟಳೆಯು
ಸತ್ಯವನ್ನರಸುವುದೆ
ಜೀವನದ ಗುರಿಯು

ಗುರುವಿನಾಶೀರ್ವಾದ
ನಮ್ಮೊಡನೆ ಇಹುದು
ವರದ ಹಸ್ತವು ನಮಗೆ
ದಾರಿ ತೋರಿಪುದು

ತತ್ಸ ವಿತರ್ ವರೇಣ್ಯ
ದೇವ ದೇವೇಶ
ಕತ್ತಲೆಯ ದೂಡುತ್ತ
ಕರುಣಿಪನು ಬೆಳಕ

ಇಂದ್ರ ವರುಣರು ವಾಯು
ಬಳಸಿ ದೋಣಿಯನು
ಮುಂದು ಮುಂದಕೆ ಚಲಿಸೆ
ನೆರವಾಗುತಿಹರು

ಇಹಲೋಕ ಭುವರ್ ಲೋಕ
ಸುವರ್ಲೋಕ ಸರಿದು
ಮಹರ್ಲೋಕ ಜನೋಲೋಕ
ತಪೋಲೋಕ ವುಳಿದು

ಸತ್ಯ ಲೋಕವ ನಾವು
ಮುಟ್ಟುವ ಮಡದಿ
ಸತ್ಯಾತ್ಮನಂಘ್ರಿಯ
ನ್ನಪ್ಪುವ ಭರದಿ.

# ಶ್ರೀಮಾನ್ ಗೋಪಾಲಕೃಷ್ಣರಾಯರ
# ಇತರ ಗ್ರಂಥಗಳು

---

ಕಥಾಸಂಗ್ರಹಗಳು

೧. ಉಡುಗೊರೆ
೨. ಬಂಗಾರದ ಡಾಬು
೩. ನಟಿ
೪. ಸೋತು ಗೆದ್ದರು
(ಅಚ್ಚಿನಲ್ಲಿ)

ನಾಟಕಗಳು

೧. ಅಪರಾಧಿ
೨. ಕನ್ಯಾರ್ಥಿ
೩. ಕವಿ ಕುಟೀರ
೪. ಸಾಕು ಕೂಸು

ಕವಿತಾ ಸಂಗ್ರಹ

೧. ಅನಾಥೆ ಮತ್ತು ಇತರ ಕವನಗಳು.
(ಅಚ್ಚಿನಲ್ಲಿ)

# ಮನೋಹರ ಗ್ರಂಥಮಾಲೆಯಲ್ಲಿ

## ಬರಲಿರುವ ಕುಸುಮಗಳು*

**ಮಿಂಚಿನ ಹುಡಿ**

(ಎಂಟು ಏಕಾಂಕಗಳ ಸಂಗ್ರಹ)

ಬರೆದವರು :

ಕೃಷ್ಣಕುಮಾರ

**ಚಕ್ರದೃಷ್ಟಿ**

(ಸಾಮಾಜಿಕ ಒಂದು ವ್ಯಂಗ್ಯಚಿತ್ರ)

ಬರೆದವರು :

ನಾ. ಕಸ್ತೂರಿ

**ನಟಸಾರ್ವಭೌಮ**

(ಸಾಮಾಜಿಕ ಕಾದಂಬರಿ)

ಬರೆದವರು :

ಅ. ನ. ಕೃಷ್ಣರಾಯರು

**ನಕ್ಕಳಾತಾಯಿ**

(ಕನ್ನಡ ಸಾಹಿತ್ಯದಲ್ಲಿ ಹಾಸ್ಯದ ರೇಖೆಗಳನ್ನು ತೋರಿಸುವ ಕಥಾತ್ಮಕ ಗ್ರಂಥ)

ಬರೆದವರು :

ಜಿ. ಪಿ. ರಾಜರತ್ನಂ

**ಅನಂತ**

(ಸಾಮಾಜಿಕ ಕಾದಂಬರಿ)

ಬರೆದವರು :

'ಸತ್ಯಬೋಧ'

**ತಾಯಿ**

('ಪರ್ಲ್‌ಬಕ್'ರ ಒಂದು ಕಾದಂಬರಿಯ ಕಲ್ಪನೆಯಿಂದ ಬರೆದುದು)

ಬರೆದವರು :

ಕೃಷ್ಣಕುಮಾರ

**ನನ್ನ ಕನಸುಗಳು**

(ಕನಸುಗಳ ಸಂಗ್ರಹ)

ಕಂಡವರು :

ಜಡಭರತ

---

* ಇವನ್ನು ಪ್ರಕಟಿಸುವ ಕ್ರಮದಲ್ಲಿ ಹಿಂದೆಮುಂದೆಯಾಗಬಹುದು.

